ಶ್ರೀ ಸಿದ್ಧಗಂಗಾ ಮಠಾಧ್ಯಕ್ಷ ತ್ರಿವಿಧ ದಾಸೋಹ ಮೂರ್ತಿಗಳಾದ
**ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರ**

## " ವಜ್ರಮಹೋತ್ಸವ ನಿಧಿ ಸಮಿತಿ ".

" ಶಿವಪಥವನರಿವಡೆ ಗುರುಪಥವೇ ಮೊದಲು "

ಎಂಬಂತೆ ಪೂಜ್ಯ ಶ್ರೀ ಶ್ರೀ ಉದ್ದಾನ ಶಿವಯೋಗಿಗಳ ಕರಕಮಲ ಸಂಜಾತರಾಗಿ 60 ವರ್ಷಗಳ ಸೇವಾ ಮಣಿಹದ ಸ್ಮರಣೆಗಾಗಿ ನಾಡಿನ ಭಕ್ತಕೋಟಿ ವಜ್ರಮಹೋತ್ಸವ ಆಚರಿಸಲು ನಿರ್ಧರಿಸಿದೆ.

**ವಜ್ರಮಹೋತ್ಸವ ನೆನಪಿನ ಪ್ರತಿಷ್ಠಾನ :**

**4 ಕೋಟಿ ರೂಗಳ ವೆಚ್ಚದಲ್ಲಿ**
**ಬೃಹತ್ ವಿದ್ಯಾರ್ಥಿ ವಸತಿ ನಿಲಯ**
ಮತ್ತು
**ಬೃಹತ್ ಪ್ರಸಾದ ನಿಲಯ.**
(16-2-92) ರಂದು

ಭಾರತದ ರಾಷ್ಟ್ರಪತಿ ಡಾ॥ **ಶ್ರೀ ಶಂಕರದಯಾಳ ಶರ್ಮ** ಮತ್ತು ಲೋಕಸಭಾಧ್ಯಕ್ಷ **ಶ್ರೀ ಶಿವರಾಜ್ ಪಾಟೀಲ್** ಇವುಗಳ ಶಿಲಾನ್ಯಾಸವನ್ನು ನೆರವೇರಿಸಿದ್ದಾರೆ.

5/-, 10/-, 25/-, 51/-, 101/-, 201/-, 501/-, 1001/ 5001/-, 10,001/-, 35,000 ರೂ.ಗಳ ಕೂಪನ್‌ಗಳು ನಿಧಿ ಸಂಗ್ರಹಕ್ಕಾಗಿ ಮಾರಾಟಕ್ಕೆ ಬಿಡುಗಡೆ ಮಾಡಿದೆ.

ಈ ಸ್ಮರಣಾರ್ಹವಾದ ಪುಣ್ಯಕಾರ್ಯಕ್ಕೆ ನಾಡಿನ ಭಕ್ತಾದಿಗಳು, ಹಿತೈಷಿಗಳು, ಹಳೆಯ ವಿದ್ಯಾರ್ಥಿಗಳು ಕೂಪನ್‌ಗಳನ್ನು ಕೊಳ್ಳುವುದರ ಮೂಲಕ ನಿಧಿಗೆ ಉದಾರವಾಗಿ ನೀಡಬೇಕಾಗಿ ಕೋರುತ್ತೇವೆ.

ಬಿ. ಎಸ್. ಮುದ್ದಪ್ಪ, ಐ.ಎ.ಎಸ್,
ಕಾರ್ಯಾಧ್ಯಕ್ಷರು,

ಎಸ್. ಎಸ್. ಹಸಬಿ,
ಕಾರ್ಯದರ್ಶಿಗಳು.

**ಪದ್ಮಭೂಷಣ ಡಾ॥ ಎಂ. ಸಿ. ಮೋದಿ,**
ಅಧ್ಯಕ್ಷರು,
ವಜ್ರಮಹೋತ್ಸವ ಸಮಿತಿ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572 104.

# ಸಿದ್ಧಗಂಗಾ

**ಸಂಪುಟ-29. ಸಂಚಿಕೆ-2-3. ಫೆಬ್ರವರಿಮಾರ್ಚಿ-93.**

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ.

ಅನಾಹತ ಚಕ್ರದಲಿ ಜಂಗಮ ಲಿಂಗವನಿರಿಸಿ
ಜಂಗಮ ಲಿಂಗದ ಭಕ್ತನ। ಬೆಳಗಿಸಿದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

×× ×× ××

ವಿಶುದ್ಧ ಚಕ್ರದೊಳು ಪ್ರಸಾದಲಿಂಗವನಿಟ್ಟು
ಪ್ರಸಾದ ಲಿಂಗದ ಭಕ್ತನ ಬೆಳಗಿಸಿದ। ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

×× ×× ××

ಆಗ್ನೇಯ ಚಕ್ರದೊಳು ಮಹಾಲಿಂಗವನೆಲೆಗೊಳಿಸಿ
ಮಹಾಲಿಂಗದ ಭಕ್ತನ ಬೆಳಗಿಸಿದ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು. ॥

‡‡ + ‡‡ ÷ ‡‡

—**ಹೆಚ್. ವಿ. ವೀರಭದ್ರಯ್ಯ.**

| ಲೇಖನ | ಲೇಖಕರು | ಪುಟ |
|---|---|---|
| * ಶ್ರೀವಾಣಿ | | 5 |
| * ಶ್ರೀ ಸಿದ್ಧಲಿಂಗೇಶ್ವರ ವಚನ | | 7 |
| * ಸಂಪಾದಕೀಯ | | 9 |
| * ಸಿದ್ಧಗಂಗಾ ಪತ್ರಿಕೆಯು ಚಿರಾಯುವಾಗಲಿ | -ಗುರುಮೂರ್ತಿದೇವರು | 11 |
| * ನಮ್ಮ ಶಿಕ್ಷಣ | —ಕಯ್ಯಾರ ಕಿಞ್ಞಣ್ಣ ರೈ, | 12 |
| * ವಿಜ್ಞಾನ ಮತ್ತು ಧರ್ಮ | —ಅರೆಯೂರು ನರಸಿಂಹಮೂರ್ತಿ | 15 |
| * ಶ್ರೀ ಸಿದ್ಧರಾಮೇಶ್ವರನ ಬದುಕು | —ಶಿವಾನಂದ ಗುರೂಜಿ | 19 |
| * ಲಿಂಬೆಹಣ್ಣಿನಂಥ ಔಷಧಿ ಇನ್ನೊಂದಿಲ್ಲ | -ಪ॥ ರಾಮಕೃಷ್ಣ ಶಾಸ್ತ್ರಿ | 25 |
| * ಸ್ವರದಿಂದ ಅಪರಾಧಿಯ ಬಂಧನ | —ಬಿ. ಸುಬ್ರಾಯ ಅಡಿಗ | 28 |
| * ಗುರುವೇ ಮುಕ್ತಿಗೆ ಮೂಲಾಧಾರ | -ಶ್ರೀ ನಾಗೇಶ್ ನಿಲುಗಲ್ | 33 |
| * ನಿಜಗುರು ಮಹಾಂತಲಿಂಗ | -ಡಾ॥ ಜಯಶ್ರೀದಂಡೆ | 35 |
| * ಮಾನಸಿಕ ಶಕ್ತಿಗಳು | —ಡಿ. ಎಂ. ಬಡಿಗೇರ | 36 |
| * ಬಸವತತ್ತ್ವ ರತ್ನಾಕರ-19 | —ಮೋಟಗಿ ಮಲ್ಲಿಕಾರ್ಜುನ | 40 |
| * ನಾವೆಂಥವರು ? | ಎಸ್. ಎಸ್. ಅಶ್ವತ್ಥಲಕ್ಷ್ಮಮ್ಮ | 47 |
| * ವಿಚಾರ | ಡಾ॥ ಅಹಲ್ಯಚಿಂತಾಮಣಿ | 49 |
| * ಗ್ರಾಮಾಂತರ ಬಸವಜಯಂತಿ | | 52 |
| * ಕ್ಷೇತ್ರವಾರ್ತೆ | —ಹೆಚ್. ಬಿ. ಗಂಗಾಧರಯ್ಯ | 54 |


# ಶ್ರೀ ವಾಣಿ

ಮನುಷ್ಯನೆಂದರೆ ಯಾರು? ಎಂಬುದಾಗಿ ಹಿರಿಯರು ಚಿಂತನ ನಡೆಸಿದ್ದಾರೆ. ಉತ್ತರಕಂಡು ಕೊಂಡಿದ್ದಾರೆ. ಮನುಷ್ಯರಾಗಿ ಬಾಳಿ ತೋರಿಸಿದ್ದಾರೆ. ಮನುಷ್ಯರಾಗುವುದೆಂದರೆ ತಮ್ಮಲ್ಲಿರುವ ಶಕ್ತಿ ವಿಶೇಷನ್ನು ಸದುಪಯೋಗ ಮಾಡಿಕೊಂಡು ತಾನೂ ಬಾಳುವುದು ತನ್ನಂತೆ ಇತರರೂ ಬಾಳಲು ಸಹಕರಿಸುವುದೆಂದರ್ಥ. ಮನುಷ್ಯನೆಂದರೆ ಕೇವಲ ದೇಹವಲ್ಲ. ಕೇವಲ ಆತ್ಮವೂ ಅಲ್ಲ. ದೇಹ ಆತ್ಮಗಳ ಸುಂದರ ಸಮನ್ವಯ. ಪರಸ್ಪರ ಸಹಕಾರ. ಆತ್ಮ ಪ್ರಕಾಶವಾಗಬೇಕಾದರೆ ದೇಹ ಬೇಕೇ ಬೇಕು. ಆತ್ಮವಿಲ್ಲದೆ ದೇಹ ವ್ಯವಹರಿಸಲಾರದು. ಒಂದು ಆಶ್ರಯಸ್ಥಾನ, ಮತ್ತೊಂದು ಕ್ರಿಯಾ ಪ್ರೇರಕ. ಆತ್ಮನ ವ್ಯವಹಾರಕ್ಕೆ ದೇಹದ ಸಹಕಾರ ಬೇಕೆ ಬೇಕು ದೇಹ ದೇವಾಲಯವಿದ್ದಂತೆ. ಆತ್ಮ ದೇವರಿದ್ದಂತೆ. ದೇಹ ಸಾಯುತ್ತದೆ. ಆತ್ಮ ಅರಳುತ್ತದೆ. "ಅಗ್ನಿ ಉಳಿದು ಕರ್ಪೂರ ಕರಗಿತ." ಎನ್ನುತ್ತಾರೆ ಶರಣರು. ಆತ್ಮಕ್ಕೆ ಸಾವಿಲ್ಲ. ಅದು ನಿತ್ಯ. ಜೀರ್ಣ ದೇಹವನ್ನು ಬಿಟ್ಟು ಮತ್ತೊಂದು ಅಸ್ತಿತ್ವವನ್ನು ಅದು ಹೊಂದುತ್ತದೆ. ಆತ್ಮವನ್ನು ಯಾರೂ ನಾಶಮಾಡಲಾರರು "ನೈನಂಛಿದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ಎನ್ನುತ್ತದೆ ಗೀತೆ. ಮನುಷ್ಯನಿಗೆ ದೇಹ ಜ್ಞಾನವೂ ಬೇಕು. ಆತ್ಮದ ಅರಿವೂ ಇರಬೇಕು. "ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ, ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ" ಎಂಬ ಬಸವಣ್ಣನವರ ವಾಣಿಯನ್ನಿಲ್ಲಿ ನೆನೆಯಬೇಕು. ತನುವನ್ನು ಸಂತೈಸುವುದೆಂದರೆ ಸಾಮಾನ್ಯವಲ್ಲ. ಅದು ವಿಕಾರಕ್ಕೆ ಒಳಗಾದಂತೆ ವಿಕಾಸಕ್ಕೆ ಮುಖಮಾಡುವಂತೆ ನೋಡಿಕೊಳ್ಳಬೇಕು. ಮನವನ್ನು ಸಂತೈಸುವುದೂ ಮತ್ತೂ ಕಷ್ಟ. 'ಪರಿವ ಮನಕೆ ಪಗ್ಗವಿಲ್ಲ" ಎಂದಿದ್ದಾನೆ ಕವಿ. ಅತ್ತಲಿತ್ತ ಹೋಗದಂತೆ ಮನವನ್ನು ಕಟ್ಟಬೇಕು. ಜೀವನದ ಸಾರ್ಥಕತೆಯತ್ತ ಸಾಧನೆ ಕೈಗೊಳ್ಳಬೇಕು. ಮನುಷ್ಯ ಪ್ರಾಣಿಗಿಂತ ಭಿನ್ನನಾಗಿರುವುದು ಯೋಚನಾಶಕ್ತಿಯಿಂದ. ಯೋಚನಾಶಕ್ತಿಯ ಸದುಪಯೋಗವಾದಾಗ ಮನುಷ್ಯ ಲೋಕ ಹಿತಚಿಂತಕ ನೆನಿಸಿಕೊಳ್ಳುತ್ತಾನೆ. ಸ್ವಾರ್ಥಿಯಾದಾಗ ಲೋಕ ಕಂಟಕನಾಗುತ್ತಾನೆ. ಜೀವನ ಎಂಬುದು ದೇವರಿತ್ತ ಪ್ರಸಾದವೆಂದು ಪರಿಭಾವಿಸಬೇಕು. ಪದಾರ್ಥ ಭಾವ ಹೋಗಿಪವಿತ್ರ ಪ್ರಸಾದ ಭಾವಬರಬೇಕು. ಅಕ್ಕಮಹಾದೇವಿ ಹೇಳುವಂತೆ "ಬಾರದ ಯೋನಿಗಳಲಿ ಬಂದೆ" ಎಂಬುದರ ಅರಿವಿರಬೇಕು. ಕ್ರಿಮಿ, ಕೀಟ, ಪಶು, ಪಕ್ಷಿ, ಪ್ರಾಣಿಗಳಾಗಿ ಬಂದಾದ ಮೇಲೆ ಮನುಷ್ಯನಾಗಿ ಬಂದಿದ್ದೇನೆ ಎಂಬ ಸ್ಮರಣೆಬೇಕು. ಎಲ್ಲ ಮೃಗೀಯ ಭಾವನೆಗಳಿಂದ ಮುಕ್ತನಾಗಿ ಮನುಷ್ಯನಾಗಬೇಕು. ದೇಹದೊಳಗಿರುವ ಪ್ರಾಣಿತನವನ್ನು ಪಳಗಿಸಿಕೊಂಡು ಅವುಗಳ ಸದುಪಯೋಗ ಪಡೆಯಬೇಕು. 'ಒಡವೆಯನ್ನು ಒಡೆಯರಿಗೊಪ್ಪಿಸುವ ನೇಮ"ವನ್ನು ಪರಿಪಾಲಿಸಬೇಕು. 'ಅರಿತರೆ ಶರಣ ಮರೆತರೆ ಮಾನವ" ಎಂಬ ಶರಣರ ಮಾತನ್ನು ಮನಗಾಣಬೇಕು.

(17-2-92 ಮಾದಿಹಳ್ಳಿ, ಅರಕಲಗೂಡು ತಾಲ್ಲೂಕು. ಆಶೀರ್ವಚನದಿಂದ)

## ಸಿದ್ಧಗಂಗಾ ಮಾಸಿಕ ಪತ್ರಿಕೆಯ ಒಡೆತನ ಮತ್ತು ಇತರ ವಿವರಗಳ ಸಂಬಂಧಪಟ್ಟ ಮಾಹಿತಿ

ಫಾರಂ-4

| | | | |
|---|---|---|---|
| ೧ | ಪ್ರಕಟಣೆಯ ಸ್ಥಳ | : | ಶ್ರೀ ಸಿದ್ಧಗಂಗಾಮಠ |
| ೨ | ಪ್ರಕಟವಾಗುವ ಅವಧಿ | : | ಮಾಸಿಕ |
| ೩ | ಮುದ್ರಣ ಭಾಷೆ | : | ಕನ್ನಡ |
| ೪ | ಮುದ್ರಕರ ಹೆಸರು | : | ಶ್ರೀ ಶ್ರೀ ಶಿವಕುಮಾರಸ್ವಾಮಿಗಳು |
| | ರಾಷ್ಟ್ರೀಯತೆ | : | ಭಾರತೀಯ |
| | ವಿಳಾಸ | : | ಶ್ರೀ ಸಿದ್ಧಗಂಗಾಮಠ<br>ತುಮಕೂರು ಜಿಲ್ಲಾ (ಕರ್ನಾಟಕ) |
| ೫ | ಪ್ರಕಾಶಕರ ಹೆಸರು | : | ಹೆಚ್. ಬಿ ಗಂಗಾಧರಯ್ಯ |
| | ರಾಷ್ಟ್ರೀಯತೆ | : | ಭಾರತೀಯ |
| | ವಿಳಾಸ | : | ಶ್ರೀ ಸಿದ್ಧಗಂಗಾಮಠ<br>ತುಮಕೂರು ಜಿಲ್ಲಾ (ಕರ್ನಾಟಕ) |
| ೬ | ಸಂಪಾದಕರು | : | ಶ್ರೀ ಪಂ॥ ಚನ್ನಪ್ಪ ಎರೇಸೀಮೆ |
| | ರಾಷ್ಟ್ರಿಯತೆ | : | ಭಾರತೀಯ |
| | ವಿಳಾಸ | : | ಶ್ರೀ ಸಿದ್ಧಗಂಗಾಮಠ<br>ತುಮಕೂರು ಜಿಲ್ಲಾ (ಕರ್ನಾಟಕ) |
| ೭ | ಪತ್ರಿಕೆಯ ಮಾಲೀಕರು | : | ಶ್ರೀ ಶ್ರೀ ಶಿವಕುಮಾರಸ್ವಾಮಿಗಳು<br>ಶ್ರೀ ಸಿದ್ಧಗಂಗಾಮಠ<br>ತುಮಕೂರು ಜಿಲ್ಲಾ (ಕರ್ನಾಟಕ) |
| ೮ | ನೊಂದಣಿ ಸಂಖ್ಯೆ | : | ಕೆ.ಆರ್ ಎನ್.ಕ್ಯು-9. |

**ನಾನು ಹೆಚ್.ಬಿ. ಗಂಗಾಧರಯ್ಯ, ಮೇಲಿನ ಅಂಶಗಳೆಲ್ಲ ಸತ್ಯ ಎಂದು ನನ್ನ ಜ್ಞಾನ ಮತ್ತು ನಂಬಿಕೆಗಳಿಂದ ದೃಢಪಡಿಸುತ್ತೇನೆ.**

**1 ಮಾರ್ಚಿ 1993**
ಸಿದ್ಧಗಂಗಾಮಠ

(ಸಹಿ) **ಹೆಚ್.ಬಿ. ಗಂಗಾಧರಯ್ಯ,**
ಪ್ರಕಾಶಕರು.

ಓಂ

ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ಪರಮ ಪೂಜ್ಯ ತ್ರಿವಿಧ ದಾಸೋಹಮೂರ್ತಿ

## ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ



## ಗುರುವಂದನ-86ನೇ ಜನ್ಮದಿನೋತ್ಸವ ಆಮಂತ್ರಣ.

## ಏಪ್ರಿಲ್ 11 ಭಾನುವಾರ 1993, ಬೆಳಿಗ್ಗೆ 10 ಘಂಟೆಗೆ

ಅಧ್ಯಕ್ಷತೆ: ಶ್ರೀಮನ್ ಮಹಾರಾಜ ನಿರಂಜನ ಜಗದ್ಗುರು
ಶ್ರೀ ಶ್ರೀ ಮಲ್ಲಿಕಾರ್ಜುನ ಮುರುಘರಾಜೇಂದ್ರ ಮಹಾಸ್ವಾಮಿಗಳವರು,
ಆನಂದಪುರ, ಶಿವಮೊಗ್ಗ ಜಿಲ್ಲೆ.

ಉದ್ಘಾಟನೆ : **ಸನ್ಮಾನ್ಯ ಶ್ರೀ ಎಂ. ವೀರಪ್ಪಮೊಯ್ಲಿ,**
ಮುಖ್ಯ ಮಂತ್ರಿಗಳು, ಕರ್ನಾಟಕ.

ಭಕ್ತಿ ಸಮರ್ಪಣೆ : **ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು,**
ಕಿರಿಯ ಶ್ರೀಗಳು, ಸಿದ್ಧಗಂಗಾ ಮಠ.

ಗ್ರಂಥ ಬಿಡುಗಡೆ : **" ಶ್ರೀ ಉದ್ದಾನೇಶ ಚರಿತೆ "**
ಪಂಡಿತ ಚನ್ನಪ್ಪ ಎರೆಸೀಮೆ ವಿರಚಿತ

**ಸನ್ಮಾನ್ಯ ಡಾ॥ ಎಲ್. ಬಸವರಾಜು,**
ನಿವೃತ್ತ ಕನ್ನಡ ಪ್ರಾಧ್ಯಾಪಕರು, ಮೈಸೂರು ವಿಶ್ವವಿದ್ಯಾಲಯ.

ಮುಖ್ಯ ಅತಿಥಿಗಳು : **ಸನ್ಮಾನ್ಯ ಶ್ರೀ ವೀರೇಂದ್ರ ಪಾಟೀಲ್,**
ಮಾಜಿ ಮುಖ್ಯ ಮಂತ್ರಿಗಳು.

**ಶ್ರೀಮತಿ ಬಸವರಾಜೇಶ್ವರಿ,**
ರಾಜ್ಯಸಚಿವೆ, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ,
ಕೇಂದ್ರ ಸರ್ಕಾರ.

**ಸನ್ಮಾನ್ಯ ಶ್ರೀ ಎಸ್. ಮಲ್ಲಿಕಾರ್ಜುನಯ್ಯ,**
ಉಪಸಭಾಧ್ಯಕ್ಷರು, ಲೋಕಸಭೆ.

ವಿಶೇಷಾಹ್ವಾನಿತರು : **ಸನ್ಮಾನ್ಯ ಶ್ರೀ ಎನ್. ಹುಚ್ಚಮಾಸ್ತಿಗೌಡ,**
ಕೃಷಿ ಸಚಿವರು, ಕರ್ನಾಟಕ.

**ಶ್ರೀ ಟಿ. ಎಂ. ಮಂಜುನಾಥ್,**
ಯೋಜನಾ ಸಚಿವರು, ಕರ್ನಾಟಕ.

**ಡಾ|| ಜಿ. ಪರಮೇಶ್ವರ್,**
ರೇಷ್ಮೆ ಸಚಿವರು, ಕರ್ನಾಟಕ.

**ಶ್ರೀ ಷಫಿ ಅಹಮದ್,**
ವಿಧಾನ ಸಭಾ ಸದಸ್ಯರು, ತುಮಕೂರು ಕ್ಷೇತ್ರ.

**ಶ್ರೀ ಟಿ. ಹೆಚ್. ನಾರಾಯಣಸ್ವಾಮಿ,**
ವಿಧಾನ ಪರಿಷತ್ ಸದಸ್ಯರು, ತುಮಕೂರು.

ಸನ್ಮಾನ : **ಸನ್ಮಾನ್ಯ ಶ್ರೀ ಎಂ. ಎಸ್. ರಾಮಯ್ಯ,**
ಛೇರ್ಮನ್, ಗೋಕುಲ ಎಜುಕೇಷನ್ ಫೌಂಡೇಶನ್ ಟ್ರಸ್ಟ್,
ಬೆಂಗಳೂರು.

**ಸನ್ಮಾನ್ಯ ಶ್ರೀ ಪ್ರಭಾಕರ ಕೋರೆ ಬಸವಪ್ರಭು,**
ಅಧ್ಯಕ್ಷರು, ಕೆ.ಎಲ್.ಇ. ಸೊಸೈಟಿ, ಬೆಳಗಾಂ ಮತ್ತು
ರಾಜ್ಯಸಭಾ ಸದಸ್ಯರು,

**ಸನ್ಮಾನ್ಯ ಶ್ರೀ ಆರ್. ಎನ್. ಶೆಟ್ಟಿ,**
ಕೈಗಾರಿಕೋದ್ಯಮಿಗಳು, ಹುಬ್ಬಳ್ಳಿ, ಧಾರವಾಡ ಜಿಲ್ಲೆ.

**ಸನ್ಮಾನ್ಯ ಶ್ರೀ ಗೊ. ರು. ಚನ್ನಬಸಪ್ಪ,**
ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

**ವಿ.ಸೂ :-** ಬೆಳಗ್ಗೆ 11 ಘಂಟೆಗೆ ಶ್ರೀಮತಿ ಸರ್ವಮಂಗಳಾ ಶಂಕರ್ ಸಂಗಡಿಗರು, ಇವರಿಂದ ವಚನಗಾಯನ ಮತ್ತು ಸಂಜೆ 4ಕ್ಕೆ ಶಿವಾನುಭವ ಗೋಷ್ಠಿ ಏರ್ಪಡಿಸಿದೆ.

**ಈ ಗುರುವಂದನ ಸಮಾರಂಭದಲ್ಲಿ ತಾವು ಭಾಗವಹಿಸಬೇಕಾಗಿ ಕೋರುತ್ತೇವೆ.**

**ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಗಳು,**
**ಹಳೆಯ ವಿದ್ಯಾರ್ಥಿ ಸಂಘ ಮತ್ತು ಭಕ್ತಮಂಡಳಿ.**

## ಶ್ರೀ ಸಿದ್ಧಲಿಂಗೇಶ್ವರ ವಚನ



ಅಷ್ಟವಿಧಾರ್ಚನೆಯ ಮಾಡಿದರೇನೋ
ತನುಗುಣಂಗಳ ಮೆಟ್ಟಿ ಮುರಿಯದನ್ನಕ್ಕರ ?
ಷೋಡಶೋಪಚಾರವ ಮಾಡಿದರೇನೋ
ಸೂಳೆಯರಂತೆ ಹಲವು ಕಡೆಗೆ ಹೋಹಮನವ
ನೆನಹಿನ ಹಸ್ತದಲ್ಲಿ ಹಿಡಿದು
ಇಷ್ಟಲಿಂಗದಲ್ಲಿ ನೆನಹ ಗಟ್ಟಿಗೊಳಿಸಿ
ಕೃತ ನಿಶ್ಚಯದಿಂ ದೃಢವಿಡಿದು ಅನಿಷ್ಟವ ಪರಿಹರಿಸ ಬಲ್ಲರೆ
ಆತನೆ ಶಿವಲಿಂಗಾರ್ಚಕನು; ಲಿಂಗಧ್ಯಾನ ಸಂಪನ್ನನು;
ಲಿಂಗವಲ್ಲ ದನ್ಯವನರಿಯದ ಅಚಲಿತ ಮಹಿಮನು ನೋಡಾ !
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ !

ಲಿಂಗಪೂಜೆಯ ಮರ್ಮವನ್ನು ತಿಳಿಯದೆ ಎಷ್ಟುದಿನಗಳ ತನಕ ಲಿಂಗಪೂಜೆಯನ್ನು ಮಾಡಿದರೂ ಏನೂ ಪ್ರಯೋಜನವಾಗುವುದಿಲ್ಲ. ಉಪಾಸಕರು ಉಪಾಸ್ಯದ ಗುಣಗಳನ್ನು ತಮ್ಮಲ್ಲಿ ಅಳವಡಿಸಿ ಕೊಂಡಾಗಲೇ ಉಪಾಸನೆಯು ಸಫಲವಾಗುವುದು. ದೈವೀಗುಣಗಳನ್ನು ಪಡೆಯುವಲ್ಲಿ ಯಾರು ಎಷ್ಟು ಪ್ರಗತಿಯನ್ನು ಸಾಧಿಸುವರೋ ಅಷ್ಟು ಪೂಜೆಯ ಪ್ರಯೋಜನವನ್ನು ಹೊಂದಿದವರೆಂದು ತಿಳಿಯಬೇಕು. ದೇವನನ್ನು ಕೈಯಲ್ಲಿ ಹಿಡಿದುಕೊಂಡು ಆವನತ್ತ ನಮ್ಮ ದೃಷ್ಟಿಯನ್ನು ಚೆಲ್ಲಿ ನೇತ್ರಗಳ ಮುಖಾಂತರ ದೇವರನ್ನು ಹೃದಯದಲ್ಲಿ ಸ್ಥಿರಗೊಳಿಸಿದರೆ ಹೃದಯದಲ್ಲಿ ಚಿರಕಾಲದಿಂದಲೂ ವಾಸಮಾಡಿದ ಮಾಯಿಕ ವಾಸನೆಗಳೆಲ್ಲ ಅಳಿದು ಬಿಡುವುವು. ಯಾವ ವಾಸನೆಗಳು ಜೀವವನ್ನು ಜನ್ಮ ಜನ್ಮಾಂತರಗಳ ಚಕ್ರದಲ್ಲಿ ಹಾಕಿ ತಿರುವಲು ಹೃದ್ಗಂಹ್ವರದಲ್ಲಿ ಕುಳಿತಿದ್ದವೋ ಅವನ್ನೇ ಸುಟ್ಟು ಬಿಟ್ಟರೆ ಜನ್ಮಾಂತರ ಪ್ರವೇಶದ ಭಯವೇ ಅಳಿದು ಹೋಗಿ ಬಿಡುವುದು. ಹೀಗೆ ಲಿಂಗವ ಪೂಜಿಸಿ ಲಿಂಗವೇ ಆಗುವ ಇಂಗಿತವನ್ನು ನಮ್ಮ ಹಿರಿಯರು ಕಂಡು ಹಿಡಿದು ಹೇಳಿದ್ದು ನಮ್ಮ ಅಹೋ ಮಹಾಭಾಗ್ಯ ಮಾನವನ ಜೀವನವು ಪೂರ್ಣ ಅರಳುವುದಕ್ಕೆ ಇಷ್ಟಲಿಂಗದ ಪೂಜೆಯು ಹೊರತು ಮತ್ತಾವ ಸದುಪಾಯವಿರುವುದಿಲ್ಲ.

ಚರಾಚರಾತ್ಮವಾದ ಇಡೀಬ್ರಹ್ಮಾಂಡವನ್ನೇ ತನ್ನಲ್ಲಿಟ್ಟುಕೊಂಡ ಲಿಂಗಕ್ಕಿಂತ ಮತ್ತಾವುದು ದೊಡ್ಡದಿರುವುದು ? ಅಂತಹ ಲಿಂಗದ ಪೂಜೆಯನ್ನು ಆವ್ಯಭಿಚರಿತ ಭಕ್ತಿಯಿಂದ ಮಾಡುವ ವ್ಯಕ್ತಿಗಳು ಪರಿಪೂರ್ಣ ಲಿಂಗಸ್ವರೂಪರೇ ಆಗುವರು.

[ಕೃಪೆ:- ಶ್ರೀ ಸಿದ್ಧಲಿಂಗ ಶಿವಯೋಗೀಶ್ವರರು ನಿರೂಪಿಸಿದ "ಷಟ್‌ಸ್ಥಲ ಜ್ಞಾನಸಾರಾಮೃತ" ಪ್ರಕಾಶಕರು- ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ ಸೇವಾಸಂಘ, ಎಡೆಯೂರು-ಗದಗ]

**ಸಿದ್ಧಗಂಗಾ ಮಾಸ ಪತ್ರಿಕೆ**

ಶ್ರೀ ಸಿದ್ಧಗಂಗಾ ಮಠ - 572 104

ತುಮಕೂರು ಜಿಲ್ಲೆ

---

**ಡಾ|| ಎಂ ಎನ್. ಚನ್ನಬಸಪ್ಪ**

ಪ್ರಧಾನ ಕಾರ್ಯದರ್ಶಿಗಳು

ಹಳೆಯ ವಿದ್ಯಾರ್ಥಿ ಸಂಘ

* * *

**ಪ|| ಚನ್ನಪ್ಪ ಎರೇಸೀಮೆ**

ಪ್ರಧಾನ ಸಂಪಾದಕರು

* * *

**ಹೆಚ್. ವಿ. ವೀರಭದ್ರಯ್ಯ**

ಸಂಪಾದಕರು

* * *

**ಬಿ. ವೀರಭದ್ರಯ್ಯ**

**ಪಿ. ಎನ್. ಚಂದ್ರಶೇಖರಯ್ಯ**

**ಎಂ. ರೇಣುಕಾರಾಧ್ಯ**

ಸಂಪಾದಕ ಮಂಡಳಿ

* * *

**ಹೆಚ್. ಬಿ. ಗಂಗಾಧರಯ್ಯ**

ಪ್ರಕಾಶಕರು

* * *

**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ**

ಮುದ್ರಕರು

* * *

**ಶ್ರೀ ಸಿದ್ಧಗಂಗಾಕ್ಷೇತ್ರ**

ಪ್ರಕಟಣೆಯ ಸ್ಥಳ

---

**ಚಂದಾ ವಿವರ**

ವಾರ್ಷಿಕ ಚಂದಾ 25-00ರೂ

ಆಜೀವ ಸದಸ್ಯತ್ವ 300-00

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ. ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಶ್ರೀ ಶ್ರೀ ಡಾ|| ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ. ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

---

"ಸಂಪಾದಕರು"

'ಸಿದ್ಧಗಂಗಾ' ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ

ತುಮಕೂರು ಜಿಲ್ಲೆ-572104.

ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ

## ಸಂಪಾದಕೀಯ

ಪರಮ ಪೂಜ್ಯ ಶ್ರೀ ಶ್ರೀಗಳ ವಜ್ರಮಹೋತ್ಸವದ ಯೋಜಿತ ಕಾರ್ಯಗಳೆಲ್ಲ ಕ್ರಿಯಾಶೀಲವಾಗಿದೆ. ಕಟ್ಟಡಗಳು ನಿರ್ಮಾಣವಾಗುತ್ತಿವೆ. ಸೇವಾ ಸಮಿತಿಯ ಪದಾದಿಕಾರಿಗಳಂತೂ ಹಗಲಿರುಳು ದುಡಿಯುತಿದ್ದಾರೆ. ಭಕ್ತಾದಿಗಳು, ಅಭಿಮಾನಿಗಳು ಸಮಾರಂಭದ ದಿನವನ್ನು ಎದುರು ನೋಡುತ್ತಿದ್ದಾರೆ. ಕೊಡುಗೈ ದಾನಿಗಳು ಉದಾರ ಹೃದಯಿಗಳಾಗಿ ಮುಕ್ತ ಹಸ್ತರಾಗಿ ಕಾಣಿಕೆ ನೀಡಲು ಮುಂದೆ ಬರುತ್ತಿದ್ದಾರೆ. ಹತ್ತುಹತ್ತು ಜನ ಕೂಡಿದ ಕಡೆ ಸೇವಾ ಸಮಿತಿಯ ಸದಸ್ಯರು ವಿನಯ ಶೀಲರಾಗಿ ವಜ್ರಮಹೋತ್ಸವ ನಿಧಿ ಸಂಗ್ರಹಣೆಗಾಗಿ ವಿನಂತಿ ಮಾಡಿಕೊಳ್ಳುತ್ತಿದ್ದಾರೆ. ಈ ಮಧ್ಯೆ "ಸಿದ್ಧಗಂಗಾ" ಪತ್ರಿಕೆ ಶ್ರೀ ಮಠದ ಆಶ್ರಯದಲ್ಲಿ ನಡೆಯುತ್ತಿರುವ ಶಿಕ್ಷಣ ಸಂಸ್ಥೆಗಳಲ್ಲಿ ಉದ್ಯೋಗಿಗಳಾಗಿರುವವರಲ್ಲಿ ಒಂದಲ್ಲ; ಎರಡು ಬಾರಿ ವಿನಮ್ರವಾಗಿ ಪ್ರಾರ್ಥಿಸಿಕೊಂಡಿದೆ. 'ತಮಗೆ ಲಭ್ಯವಾಗಿರುವ ಪುಣ್ಯಾವಕಾಶವನ್ನು ಕಾಣಿಕೆ ನೀಡುವುದರ ಮೂಲಕ ಸದುಪಯೋಗ ಮಾಡಿಕೊಳ್ಳಬೇಕೆಂದು.' ಸಾಕಷ್ಟು ಉದ್ಯೋಗಿಗಳು ಸಕ್ರಿಯವಾಗಿ ಸ್ಪಂದಿಸಿದ್ದಾರೆ. ಅವರಿಗೆಲ್ಲ ಕೃತಜ್ಞತೆಗಳು, ಸ್ಪಂದಿಸಿದರೂ ಕ್ರಿಯಾಮುಖಿಗಳಾಗದವರು ಇನ್ನೂ ಇದ್ದಾರೆ. ಅವರಿಗೆಲ್ಲ ಮತ್ತೊಮ್ಮೆ ವಿನಂತಿ. ಪ್ರತಿಯೊಬ್ಬರೂ ತಮ್ಮ ಪಾಲಿನ ಕಾಣಿಕೆ ನೀಡಿ ವಜ್ರಮಹೋತ್ಸವ ವಿಜೃಂಭಣೆಯಿಂದ ನಡೆಯಲು ಸಹಕರಿಸಬೇಕೆಂದು ಕತ್ತಲಲ್ಲಿದ್ದಾಗ, ಕಷ್ಟದಲ್ಲಿದ್ದಾಗ ಜೀವನೋಪಾಯಕ್ಕೆ ಮಾರ್ಗ ಕಲ್ಪಿಸಿಕೊಟ್ಟ ಮಹಾನುಭಾವರನ್ನು ಮರೆಯಬಾರದು. ಅವರು ಮಾಡಿರುವ ಉಪಕಾರ ತೀರಿಸುವಂಥದಲ್ಲ. ಕೃತಜ್ಞತೆಯನ್ನು ತುಂಬಿಕೊಳ್ಳಬೇಕು. ಸಾರ್ವಜನಿಕರು ಕೇಳುವ "ಶ್ರೀ ಮಠದ ಆಶ್ರಯದಲ್ಲಿ ಕೆಲಸಗಾರರಾಗಿರುವವರೆಲ್ಲ ಮನಸ್ಸು ಮಾಡಿದ್ದರೆ, ಮುಕ್ತವಾಗಿ ನೀಡಿದರೆ ವಜ್ರಮಹೋತ್ಸವ ಯೋಜನೆಗಳೇನು ದೊಡ್ಡವಾಗಲಾರವು"–ಎನ್ನುವ ಮಾತಿಗೆ ಉತ್ತರಿಸುವ ಜವಾಬ್ದಾರಿ ಉದ್ಯೋಗಿಗಳ ಮೇಲಿದೆ. ಹಳೆಯ ವಿದ್ಯಾರ್ಥಿಗಳು ಅಸಂಖ್ಯ ಲೆಕ್ಕಕ್ಕೆ ಸಿಕ್ಕಿರುವ ಸಂಖ್ಯೆ ಅಲ್ಪ. ಅದರಲ್ಲಿ ಸ್ಪಂದಿಸಿರುವವರು ಇನ್ನೂ ಕಡಿಮೆ. ಪರಮ ಪೂಜ್ಯರಿಗೆ ಎಂಬತ್ತೈದು ತುಂಬುತ್ತಿದೆ. ಅರವತ್ತೊಮ್ಮರು ವರ್ಷಗಳಿಂದ ಲೋಕ ಕಲ್ಯಾಣಕ್ಕಾಗಿ ಹಗಲಿರುಳೆನ್ನದೆ, ದಿನಕ್ಕೆ ಇಪ್ಪತ್ತೊಂದು ಘಂಟೆಗಳಂತೆ, ಗಂಧದ ಕೊರಡಿನಂತೆ ತಮ್ಮ ಕಾಯವನ್ನು ಸವೆಸುತ್ತಿದ್ದಾರೆ. ಅವರು ತುಳಿದ ದಾರಿ ಪವಿತ್ರವಾದುದು, ಸೇವಾಪಥ. ಮಾನವೀಯತೆಯ ಶಿವಪಥ ಇಂಥ ಪುಣ್ಯಮೂರ್ತಿಗಳ ವಜ್ರಮಹೋತ್ಸವಕ್ಕೆ ನೆರವಾಗುವುದೆಂದರೆ ಅದಕ್ಕಿಂತ ಶ್ರೇಷ್ಠವಾದ ಪೂಜೆ, ಯಾತ್ರೆ, ಯಜ್ಞ, ಕಲ್ಯಾಣ ಮತ್ತೊಂದಿಲ್ಲ. ಅನಕ್ಷರಸ್ಥ ಗ್ರಾಮೀಣ ಬಂಧುಗಳು ಭಕ್ತಿಭಾವದಿಂದ ನೀಡುತ್ತಿದ್ದಾರೆ. ಉದ್ಯೋಗಿಗಳಾದ ಬಂಧುಗಳು ಈಗ ಮುಂದೆಬರಬೇಕು. ಅದು ಅವರ ಆದ್ಯ ಕರ್ತವ್ಯ, ಧರ್ಮ. 'ಸಿದ್ಧಗಂಗಾ' ಸಂಪಾದಕೀಯದ ಮೂಲಕ ಮತ್ತೊಮ್ಮೆ ಪ್ರಾರ್ಥಿಸಿಕೊಳ್ಳುತ್ತಿದೆ; ಸಹಕಾರ ನಿರೀಕ್ಷಿಸುತ್ತದೆ.

## "ಕರಾವಳಿ"

ಕಂಡವವೆ ಕೆ, ಎನ್. ರಾವ್, 'ಆನಂದ' 14ನೇ ಬ್ಲಾಕ್ ದಾಂಡೇಲಿ

ಎತ್ತೆತ್ತ ನೋಡಿದರು ಕತ್ತೆತ್ತಿ ನಿಂತಿವೆ।
ಮುತ್ತು ಪೋಣಿಸಿದಂತೆ ತೆಂಗೊಂಚಲಂಗಳು ॥
ಎತ್ತರದಲಿ ಮುಗಿಲ ಕೋಟೆಯ ಭೇದಿಸಿ।
ಸುತ್ತಿ ಓಲಾಡುತ್ತ ವಿಹವಲ್ಲೀ। ಕಡಲ ಕರೆಯಲ್ಲಿ॥ ॥೧॥

ಅಲ್ಲಲ್ಲಿ ನದಿಗಳು ಅಲ್ಲಲ್ಲಿ ತೊರೆಗಳು।
ನಲ್ಲ ನಲ್ಲೆಯರಂತೆ ಬೆರೆಬೆರೆತು ನಲಿನಲಿದು ॥
ಸಲ್ಲಲಿತ ಸಲಿಲದಾಗರವ ಸೇರುತ್ತಿವೆ।
ಎಲ್ಲ ರತುನಗರ್ಭಸಾಗರಕೇ। ಚೆಲ್ವವಾರಿಧಿಗೆ ॥೨॥

ಗೆಳೆಯರು ಗೆಳೆತನದಿ ಒಡನುಡಿವಂತೆ।
ಎಳೆಯ ಬಿದಿರ್ಮೆಳೆ ಗುಂಪಿಡುವಂತೆ ॥
ಕಳೆನೀರ ತುಂಬಿ ತೊರೆಗಳ್ಕೂಡುತಿಹವು।
ಕೊಳೆಯ ನಡುಗಡ್ಡೆಗಳಿರುತಿಹವು ॥ ಕೃಷಿಗೆ ತೆರದಿಹವು ॥ ॥೩॥

ಹಸುರು ಅರಸಿನ ಬಣ್ಣಬತ್ತದ ಬಯಲುಗಳ್।
ಹಸಿದರಿಗನುವೀವ ಕಬ್ಬಿನ ತೋಪುಗಳ್ ॥
ಹಸನಾದ ಹವೆ ಗರಿವ ಗಾಳಿಯ ಮರಗಳು।
ಎಸೆವ ಹೊನ್ನೇ ಹಿಂಡು ಮೆರೆದಲ್ಲೀ। ಮರಳ ಕಾಡಲ್ಲೀ॥ ॥೪॥

ಗೇರು, ಆಲ, ಮಾವು, ಅತ್ತಿ, ಬಸರಿಯ ಮರಗಳ್।
ನಾರು ಮಾರುವರೆಲ್ಲ ಕುಂಡ ಸೇವಂತಿಗೆ ॥
ತರಕಾರಿಯಾಗರ ಮೀನ ತವರುನಾಡು।
ಮಾರುದ್ದ ಭಾವಿಯೊಳ್ ಕರೆದಲ್ಲಿ ತಿಳಿನೀರು ಕಲೆತಿಹುದೂ ಮನವ ತಣಿಸವುದೂ ॥೫॥

ಬೇಸಿಗೆ ಚಳಿಗಾಲ ಕಡನೀರುಪ್ಪಿಹುದು।
ಬೇಸದೆ ಕಾಸದೆ ಜನರಪ್ಪು ಮಾಳ್ಪರು ॥
ಬಿಸಿಲ ಬೇಗೆಗೆ ಉಪ್ಪು ಬಯಲಲ್ಲಿ ಪುಟ್ಟುವುದು।
ಮಾಸಿದ ಚಿಂದಿಗಳುಡುವ ರೂಢಿಯ ಜನರಿರುತಿಹರು। ಬಡವರಾಗಿಹರು ॥೬॥

## ಸಿದ್ಧಗಂಗಾ ಪತ್ರಿಕೆಯು ಚಿರಾಯುವಾಗಲಿ

— ಗುರುಮೂರ್ತಿದೇವರು ಹಿರೂರ, ತಾಳಿಕೋಟೆ–586214, ಬಿಜಾಪುರ ಜಿಲ್ಲೆ.

ಸಿ–ಸಿದ್ಧಾಂತಗಳಿಂದ ಕೂಡಿದ ಸಾಫಲ್ಯಭರಿತ ಸಾಧನೆಗಳಡಕವಾಗಿರುವವು.

ದ್ಧ–ದ್ಧರ್ಮಕ್ಕೆ ನೆಲೆಯಾಗಿ ನಿಂತ ದಿವ್ಯ ಚೈತನ್ಯವಿರುವದು.

ಗಂ-ಗಂಗೆಯಂತೆ ತಿಳಿಯಾಗಿ ಹರಿಯುವ ತತ್ವಗಳಿರುವವು.

ಗಾ-ಗಾಳಿಗಿಂತಲೂ ವೇಗವಾಗಿ ಬೀಸುವ ವರಪ್ರಧಾನ ವಚನ ರತ್ನಗಳಿರುವವು.

ಪ–ಪರಿಸ್ಥಿತಿಯನ್ನು ಅರಿತುಕೊಂಡು ಪರತತ್ವ ಬೋಧನೆ ನೀಡುವದು.

ತ್ರಿ-ತ್ರಿವಿಧದಾಸೋಹಮೂರ್ತಿ ಡಾ॥ಶಿವಕುಮಾರಸ್ವಾಮಿಗಳ ಆಶೀರ್ವಚನವಿರುವದು.

ಕೆ-ಕೆಡಕಿನಿಂದ ದೂರವಿರುವಂತೆ ಒಳ್ಳೆಯದಕ್ಕೆ ಅಂಜಿಕೊಳ್ಳುವಂತೆ ಹೇಳುವದು.

ಯು-ಯುಗಶ್ರೇಷ್ಠರ ಅನುಭವ ಬಿಂದುಗಳಿರುವವು.

ಚಿ–ಚಿನುಮಯ ಮೂರ್ತಿಯ ಚಿತ್ ಪ್ರಕಾಶವಿರುವದು.

ರಾ-ರಾಗ, ದ್ವೇಷ, ಅಸೂಯೆಗಳನ್ನು ಮರೆಯಿಸುವದು.

ಯು-ಯುಕ್ತವಾದ ಪಂಚಾಚಾರ ಅಷ್ಟಾವರಣಗಳ ಹಿರಿಮೆ ತುಂಬಿರುವದು.

ವಾ-ವಾದಿಸುವವರೆದುರಿನಲ್ಲಿ ಶಾಂತವಾಗಿರಬೇಕೆಂದು ಬೋಧಿಸುವದು.

ಗ-ಗಗನ ಸದೃಶ ವಿಶ್ವಮಾನವ ವಿಶ್ವಧರ್ಮ ಸಿದ್ಧಾಂತ ಪ್ರಚಾರಪಡಿಸುವದು.

ಲಿ–ಲಿಖಿತದಲಿ ಅಖಿಲರಾದ ಪರಮ ಪೂಜ್ಯರ ಶ್ರೀವಾಣಿಯಡಗಿರುವುದಯ್ಯಾ ಸಿದ್ಧಗಂಗಾಸಿದ್ಧೇಶ್ವರ.

# ನಮ್ಮ ಶಿಕ್ಷಣ

—ಕಯ್ಯಾರ ಕಿಞ್ಞಣ್ಣ ರೈ, ಪೆರಡಾಲ, ಕಾಸರಗೋಡು, ಕೇರಳ-671537.

ಅತ್ಯಂತ ಪ್ರಾಚೀನವೂ ಪರಿಪೂರ್ಣವೂ ಆದ ಶಿಕ್ಷಣ ಪದ್ಧತಿ ಸುವ್ಯವಸ್ಥೆಯಲ್ಲಿ ನಡೆಯುತ್ತಿದ್ದ ಪ್ರಪಂಚದ ರಾಷ್ಟ್ರಗಳಲ್ಲಿ ನಮ್ಮ ಭಾರತವೂ ಒಂದಾಗಿದೆ. ಮಾತ್ರವಲ್ಲ ಹಿರಿಯ ಪರಂಪರೆಯುಳ್ಳದ್ದೂ ಆಗಿದೆ. ನಾಲ್ಕೈದು ಸಾವಿರವರ್ಷಗಳ ಹಿಂದೆಯೇ ಭಾರತದಲ್ಲಿ ಶಿಕ್ಷಣ ಪದ್ಧತಿ ಕ್ರಮಬದ್ಧವಾ ಗಿರೂಪಿತವಾಗಿತ್ತು; ಗುರುಕುಲಗಳು ಸ್ಥಾಪನೆಗೊಂಡಿದ್ದವು; ಋಷಿಗಳು ಆಚಾರ್ಯರಾಗಿ ನಡೆಸುತ್ತಿದ್ದರು. ಹತ್ತು ಸಾವಿರ ವಿದ್ಯಾರ್ಥಿಗಳಿಗೆ ಅಶನ ವಸತಿಗಳನ್ನಿತ್ತು ವಿದ್ಯಾಭ್ಯಾಸ ಮಾಡಿಸುವವನನ್ನು ಕುಲಪತಿ ಎಂಬ ಹೆಸರಿನಲ್ಲಿ ಗೌರವಿಸುತ್ತಿದ್ದರು. ಶಕುಂತಲೆಯ ಸಾಕು ತಂದೆಯಾದ ಕಣ್ವ ಋಷಿಯು ಅಂತಹ ಕುಲಪತಿಗಳಲ್ಲಿ ಒಬ್ಬನು. ಗುರುಕುಲದಲ್ಲಿ ವಿದ್ಯಾಭ್ಯಾಸ ಮಾಡುವಾಗ ಶ್ರೀಮಂತನ ಪುತ್ರನೂ, ದರಿದ್ರನ ಮಗನೂ ಏಕಸಮಾನ. ದ್ರುಪದ, ದ್ರೋಣರು, ಕೃಷ್ಣ, ಕುಚೇಲರು ಹೀಗೆ ಅವರ ಸಾಮಾಜಿಕ ಅಂತಸ್ತು ಆಶ್ರಮವಾಸಿಗಳಲ್ಲಿ ಇರಲಿಲ್ಲ; ಶಾಲೆಯಲ್ಲಿ ಪಾಠ ಪ್ರವಚನಗಳ ಜತೆಗೆ ದೈಹಿಕವಾದ ದುಡಿತವನ್ನು ಆಶ್ರಮವಾಸಿಗಳು ಮಾಡುತ್ತಿದ್ದರು. ವಿದ್ಯಾರ್ಥಿಗಳಿಗೆ ಗುರುದೈವ; ಆಚಾರ್ಯ ದೇವೋಭವ ಇದು ಮಂತ್ರ; ಬ್ರಹ್ಮಚರ್ಯ, ನಿಷ್ಠೆ, ಶ್ರದ್ಧೆಗಳಿಂದ ಆತ ಅಲ್ಲಿ ಶಿಕ್ಷಣ ಪಡೆಯುತ್ತಿದ್ದನು.

ಶಿಕ್ಷಣದಲ್ಲಿ ಧಾರ್ಮಿಕ ಲೌಕಿಕ, ಶಿಕ್ಷಣಗಳನ್ನು ಪಡೆಯುವಂತೆ ಆಗ ಅನುಕೂಲವಿತ್ತು; ವೇದ ಉಪನಿಷತ್ತುಗಳ ಧಾರ್ಮಿಕ ವಿದ್ಯೆಯೊಂದಿಗೆ ಆಯುರ್ವೇದ, ಜ್ಯೋತಿಷ ಶಿಲ್ಪ, ಸಂಸ್ಕೃತ, ಪ್ರಾಕೃತ ಇಂತಹ ವಿಷಯಗಳೂ ಭಾಷೆಗಳೂ ಅಧ್ಯಯನವಾಗುತ್ತಿತ್ತು, ಶಿಕ್ಷಣದ ಉದ್ದೇಶ ಆಧ್ಯಾತ್ಮ ಸಿದ್ಧಿ, ಜ್ಞಾನಾರ್ಜನೆ, ಶ್ರೇಯಸ್ಸು ಇದರೊಂದಿಗೆ ಉತ್ತಮ ಜೀವನ ನಿರ್ವಹಣೆ ಇತ್ತು. ಬಹಳ ಹಿಂದಿನಕಾಲದಲ್ಲಿ ಅಂದರೆ ವೈದಿಕ ಕಾಲದಲ್ಲಿದ್ದ ವಿದ್ಯಾ ಪದ್ಧತಿಗೆ ಬೌದ್ಧ, ಜೈನರ ಧರ್ಮ ಪ್ರಚಾರದ ಸಂದರ್ಭ ಹೊಸತಿರುವು ಬಂತು; ಕೆಲವೇ ವರ್ಗದವರಿಗೆ ಹಿಂದೆ ಇದ್ದ ಶಿಕ್ಷಣದ ಸೌಕರ್ಯ ಸಕಲರಿಗೂ ಒದಗಿತು. ಆದರೆ ಬಹಳ ಹಿಂದೆ ಅಂದರೆ ವೇದೋಪನಿಷತ್ ಕಾಲವನ್ನು ಗಮನಿಸಿದರೆ, ಅಲ್ಲಿ ಹುಟ್ಟಿನಿಂದ ಯಾವಾತನೂ ವಿದ್ಯೆಗೆ ಅರ್ಹನಾಗಿರಲಿಲ್ಲ; ಶ್ರದ್ಧೆಯಿಂದ ಅರ್ಹತೆಬರುತ್ತಿತ್ತು. ಶೂದ್ರ ವಿದುರನ, ಸತ್ಯಕಾಮ ಜಾಬಾಲಿಯ ಜೀವನ ಕಥೆಗಳು ಇದಕ್ಕೆ ಉದಾಹರಣೆಗಳು. ಆದರೆ ಕ್ರಮೇಣ ಇದು ಉತ್ತಮರೆಂಬ ಒಂದು ವರ್ಗಕ್ಕೆ ಸೀಮಿತವಾದುದು ಬೌದ್ಧ, ಜೈನ ಧರ್ಮಗಳ ಪ್ರಚಾರ ಸಂದರ್ಭ ಶಿಕ್ಷಣ ಎಲ್ಲರಿಗೂ ಎಂಬಂತಾಯಿತು.

ಹಿಂದೆ ಸಂಸ್ಕೃತ-ಪ್ರಾಕೃತ ಭಾಷೆಗಳಲ್ಲಿ ನೀಡಲಾಗುತ್ತಿದ್ದ ವಿದ್ಯಾಭ್ಯಾಸ-ಕ್ರಿಸ್ತಶಕದ ಆದಿ ಮೊದಲ್ಗೊಂಡು ಕನ್ನಡ ಇತ್ಯಾದಿ ಭಾಷೆಗಳಲ್ಲೂ ಪ್ರಚಾರವಾಯಿತು. ಹಿಂದಿನ ಗುರುಕುಲಗಳಂತೆ 'ಐಗಳ' ಮಠಗಳು ಅಲ್ಲಲ್ಲಿ ಸ್ಥಾಪಿತವಾದುವು. ಹೆಚ್ಚಾಗಿ



ದೇವಾಲಯದ ಗೋಪುರಗಳೇ ಐಗಳ ಮಠಗಳ ಕೇಂದ್ರವಾಗಿದ್ದುವು. ಭಾರತಕ್ಕೆ ಮುಸ್ಲಿಮರ ರಾಜ್ಯಭಾರದ ಕಾಲದಲ್ಲಿ, ಬೌದ್ಧ ಜೈನರಂತೆ ವಿದ್ಯಾಭ್ಯಾಸದಲ್ಲಿ ವಿಶೇಷ ಮಾರ್ಪಾಟು ಬರಲಿಲ್ಲ; ಮತಾಂತರಕ್ಕೆ ಅಧಿಕಾರಶಾಹಿತ್ವಕ್ಕೆ ಮುಸ್ಲಿಂ ದೊರೆಗಳು ಪ್ರಾಶಸ್ತ್ಯವಿತ್ತಷ್ಟು, ಶಿಕ್ಷಣಕ್ಕೆ ಮಹತ್ವ ನೀಡಲಿಲ್ಲ; ಮಹತ್ವ ನೀಡಿ ಮಾಡಿದ ಸಾಧನೆ ಆ ಕ್ಷೇತ್ರದಲ್ಲಿ ನಗಣ್ಯವಾಗಿದೆ.

ಹತ್ತೊಂಬತ್ತನೆಯ ಶತಮಾನದಲ್ಲಿ ಬ್ರಿಟಿಷರ ಆಳುವಿಕೆ ಬಂದಾಗ, ಭಾರತದಲ್ಲಿ ಶಿಕ್ಷಣ ಪದ್ಧತಿ ತೀರಾ ಮಾರ್ಪಾಟು ಹೊಂದಿತು; ದೇಶೀಯವಾಗಿದ್ದ ಹಿಂದಿನ ವೈದಿಕ ಕಾಲದ, ಬೌದ್ಧ, ಜೈನ ಮಾತಾಚಾರ್ಯರ ಕಾಲದ ಶಿಕ್ಷಣ ಪದ್ಧತಿಗಳು ಎಲ್ಲವೂ ಮೂಲೆ ಪಾಲಾದುವು. 1835ರಲ್ಲಿ ಗವರ್ನರ್‌ಜನರಲ್ ಆಗಿದ್ದ ಸರ್‌ವಿಲಿಯಂ-ಬೆಂಟಿಂಕ್ ಇಂಗ್ಲಿಷ್ ಮಾಧ್ಯಮವನ್ನು ಜಾರಿಗೆ ತಂದನು; ಯೂರೋಪಿನಿಂದ ಬಂದ ಪಾದ್ರಿಗಳು ಇಂಗ್ಲಿಷ್ ಶಿಕ್ಷಣವನ್ನು ಮೊದಲು ಮಾಡಿದರು. ಆಂಗ್ಲರಿಗೆ ಇಲ್ಲಿ ರಾಜ್ಯಭಾರ ಮಾಡಲು, ಗುಮಾಸ್ತರ ಅವಶ್ಯವಿತ್ತು; ಆಂಗ್ಲರು ವೈಸ್ರಾಯರಾಗಿಯೋ, ಗವರ್ನರರಾಗಿಯೋ, ಹೆಚ್ಚಾದರೆ ಕಲೆಕ್ಟರ್‌ರಾಗಿಯೋ ಮಾತ್ರ ಇಲ್ಲಿ ಆಳುತ್ತಿದ್ದರು; ಮಿಕ್ಕ ಚಾಕರಿ ಮಾಡುವುದಕ್ಕೆ ಅವರಿಗೆ ಸ್ಥಳೀಯರ ಅವಶ್ಯವಿದ್ದುದರಿಂದ, ಅವರಿಗೆ ಇಂಗ್ಲಿಷ್ ಕಲಿಸಿ ತಮಗೆ ಬೇಕಾದ ಗುಮಾಸ್ತರನ್ನು ಆ ಮೂಲಕ ತಯಾರು ಮಾಡಿದರು.

ಭಾರತ, ಸ್ವಾತಂತ್ರ್ಯದ ಹೋರಾಟಕ್ಕೆ ಇಳಿದಾಗ, ಬ್ರಿಟಿಷರ ಈ ವಿದ್ಯಾಭ್ಯಾಸ ಪದ್ಧತಿಯ ಸಮೂಲ ಪರಿವರ್ತನೆ ಆಗಬೇಕೆಂದು ನಮ್ಮ ರಾಷ್ಟ್ರದ ಧುರೀಣರು ಗಾಂಧೀಜಿ ಮೊದಲಾದವರು ಸಾರಿದರು. ಗುಮಾಸ್ತರಾಗುವದೆ ಮಾತ್ರ ಶಿಕ್ಷಣವಲ್ಲ, ದೇಶದ ಸಂಪತ್ತು ಬೆಳೆಸಲು, ಸ್ವಉದ್ಯೋಗ ಮಾಡಲು, ಕೈಗಾರಿಕೆಗಳನ್ನು ಪ್ರಾರಂಭಿಸಲು ಜನತೆಗೆ ಶಿಕ್ಷಣ ನೀಡಬೇಕೆಂಬ ಪ್ರಬಲವಾದ ಆಂದೋಲನವನ್ನು ದೇಶಾಭಿಮಾನಿಗಳು ಪ್ರಚಾರ ಮಾಡಿದರು; ಮಹಾತ್ಮಗಾಂಧಿ 'ಮೂಲಶಿಕ್ಷಣ' ಪದ್ಧತಿಯೊಂದನ್ನು ಪ್ರಯೋಗಿಸಲು ತಿಳಿಸಿದರು; ಬ್ರಿಟಿಷರು ತೊಲಗಿ ಹೋಗಿ, ನಮ್ಮ ರಾಷ್ಟ್ರವನ್ನು ನಾವೇ ಆಳುವ ಅಧಿಕಾರ ಬಂದರೂ, ಗಾಂಧೀಜಿ ಹೇಳಿದ ಈ ಸ್ವಉದ್ಯೋಗ ಮೂಲವಾದ ಮೂಲ ಶಿಕ್ಷಣ ಪದ್ಧತಿ ಸಾಕಷ್ಟು ಜನಪ್ರಿಯಗೊಳ್ಳದ್ದು ನಮ್ಮ ದೌರ್ಭಾಗ್ಯ. ಇಂದಿಗೂ ಇಲ್ಲಿ ನೀಡುತ್ತಿರುವ ವಿದ್ಯೆ ಅದು ಬ್ರಿಟಿಷರು ಪ್ರಯೋಗಿಸಿದ ಶಿಕ್ಷಣ ಪದ್ಧತಿಯಲ್ಲದೆ ಬೇರೇನೂಯಿಲ್ಲ. ಎಸ್.ಎಸ್.ಎಲ್.ಸಿ. ಆದನಂತರ ಪಿ. ಯು. ಸಿ, ಆಮೇಲೆ ಗ್ರಾಜುಯೇಶನ್ ಆಮೇಲೆ ನಿರುದ್ಯೋಗ! ಇದೇ ಸ್ವಾತಂತ್ರ್ಯ ದೊರೆತ ಈ ಅರ್ಧ ಶತಮಾನಕ್ಕೆ ಹತ್ತಿರದ ಅವಧಿಯಲ್ಲಿ ನಾವು ಪಡೆದ ಶಿಕ್ಷಣವಾಗಿದೆ. ಇದರಿಂದಾಗಿ ಇಂದು ನಿರುದ್ಯೋಗಿಗಳ ಸಂಖ್ಯೆ ಹೆಚ್ಚಿದೆ. ಕಸಬು, ಕೈಗಾರಿಕೆಗಳನ್ನು ಸ್ವತಃ ಮಾಡಲು ತಿಳಿಯದೆ ದೇಶದ ಸಂಪತ್ತು ಕ್ಷೀಣವಾಗುತ್ತಿದೆ. ಪ್ರಪಂಚದಲ್ಲಿ ಸ್ವತಂತ್ರವಾಗಿರುವ ಯಾವುದೇ ರಾಷ್ಟ್ರವೂ ಇಂತಹ ಅಧೋಗತಿಗೆ ಇಳಿದಿಲ್ಲ.

ಇಂದು ಮೆಡಿಕಲ್, ಇಂಜಿನಿಯರಿಂಗ್ ಸೀಟುಗಳ ಬಗ್ಗೆ ದಾಹವೆದ್ದಿದೆ; ಅದಕ್ಕೆ ಎಷ್ಟು ಕ್ಯಾಪಿಟೇಷನ್ ಶುಲ್ಕ ಕೊಡಲು ಜನ ಸಿದ್ಧರಾಗುತ್ತಾರೆ; ಅದರ ಅರ್ಥ ಡಾಕ್ಟರರೊ, ಇಂಜಿನಿಯರೊ ಆದರೆ ಬೇಕಾದಷ್ಟು ಹಣ ಸುಲಿಗೆ ಮಾಡಬಹುದೆಂಬ ಪ್ರವೃತ್ತಿ; ಹತ್ತುಲಕ್ಷವೋ ಅದಕ್ಕಿಂತಲೂ ಹೆಚ್ಚು ರೂಪಾಯಿಗಳನ್ನು ಈ ಶಿಕ್ಷಣಗಳಬಗ್ಗೆ ವೆಚ್ಚ ಮಾಡಿ, ಆ ವೆಚ್ಚದ ಲೆಕ್ಕದಲ್ಲಿ ಮುಂದೆ ಲಕ್ಷಾಂತರ ಕೋಟ್ಯಾಂತರ ಹಣವನ್ನು ಶೋಷಣೆಯಿಂದ ಪಡೆಯುವ ಲಾಲಸೆಯೇ ಈ ಮೆಡಿಕಲ್ ಇಂಜಿನಿಯರಿಂಗ್ ಸೀಟುಗಳನ್ನು ಪಡೆಯುವ ಇಂದಿನ ದಾಹದ ಮೂಲವಾಗಿದೆ. ಹಾಗೆಂದು ಒಳ್ಳೆಯ ಡಾಕ್ಟರರು, ಒಳ್ಳೆಯ ಇಂಜಿನಿಯರರೂ ಹಲವಾರು ಇದ್ದಾರೆಂಬುದೂ ಸಮಾಧಾನಕರ.

ನಮ್ಮ ಶಿಕ್ಷಣ ಪದ್ಧತಿಯಲ್ಲಿ ತೀವ್ರ ಮಾರ್ಪಾಟು ಆಗಬೇಕಾಗಿದೆ. ನಾವು ಇಂದು ಬ್ರಿಟಿಷರನ್ನು ಭಾರತದಿಂದ ತೊಲಗಿಸಿದ್ದೇವೆ, ಸ್ವತಂತ್ರರಾಗಿದ್ದೇವೆ. ಈ ಅಭಿಮಾನ ಪಡಬಹುದಾದರೂ, ಮಾನಸಿಕವಾಗಿ ಇಂದಿಗೂ ಆಂಗ್ಲರ ಗುಲಾಮರಂತೆ ನಡೆಯುತ್ತೇವೆ, ನಮ್ಮ 3.4ವರ್ಷದ ಶಿಶುಗಳಿಗೆ cat, rat ಕಲಿಸುತ್ತೇವೆ. ಇಂಗ್ಲಿಷಿನಲ್ಲಿ ಅವರೊಡನೆ ಮಾತನಾಡುತ್ತೇವೆ ಇಂಗ್ಲಿಷ್ ಭಾಷಾ ಮಾಧ್ಯಮ ಶಾಲೆಗೆ ಕಳುಹಿಸಲು ಉತ್ಸುಕರಾಗಿದ್ದೇವೆ. ಇದರ ಅರ್ಥ, ನಮಗೆ ನಮ್ಮ ಮಾತೃ ಭಾಷೆಯ ಕುರಿತು ತೀರಾ ಅಭಿಮಾನವಿಲ್ಲವೆಂದೇ ಆಗಿದೆ. ಈ ಆಂಗ್ಲಭಾಷಾ ಮೂಲವಾದ ಶಿಕ್ಷಣವಾದರೂ ನಮ್ಮ ಶಿಶುಗಳಿಗೆ ಹೊರೆಯೇ ಆಗಿರುವುದು. ಹೆತ್ತವರಿಗೆ ಅರ್ಥವಾಗುತ್ತಿಲ್ಲ. ಮನೆಯಲ್ಲಿ ನಾಯಿ ಬೆಕ್ಕು, ದನ ನಮ್ಮಮಗು ನೋಡುತ್ತದೆ. ಅದನ್ನೇ Dog, Cat, Cow, ಎಂದು ಕಲಿಸುವಾಗ, ಆ ಡೋಗ್, ಕೇಟ್, ಕೌ, ಎಂಬ ಉಚ್ಚಾರವನ್ನು ತಿಳಿಯಲು D.o.g, C.a.t, C.o.w, ಎಂಬೀ ಮೂರು ಮೂರು ಅಕ್ಷರಗಳನ್ನು ಮಗು ಕಲಿತುಕೊಳ್ಳಬೇಕು; ಇಷ್ಟು ಕಲಿತಾದ ಮೇಲೆ ಆದು ಆತ ದಿನನಿತ್ಯ ನೋಡುವ ನಾಯಿ, ಬೆಕ್ಕು ದನವೇ, ಅದನ್ನು ಆತನ ಮಾತೃ ಭಾಷೆಯಲ್ಲಿಯೇ ಪ್ರಥಮದಲ್ಲಿಯೇ ಹೇಳಿದರೆ ವಿಷಯ ಸುಲಭವಾಗಿ ಮಂದಟ್ಟಾಗುತ್ತದೆಯಲ್ಲವೆ? ಈರೀತಿ ವಕ್ರವಾಗಿ, ತಿಳಿಸುವ ಹೊರೆಯೇಕೆ! ಇದು ಜ್ಞಾನಾರ್ಜನೆಗೆ ನಾವು ಮಗುವಿಗೆ ಕೊಡುತ್ತಿರುವ ನಿಜವಾಗಿ ಶಿಕ್ಷೆ.!

ಆದ್ದರಿಂದ, ನಮ್ಮ ಶಿಕ್ಷಣ ಪದ್ಧತಿ ಆಮೂಲಾಗ್ರ ಪರಿವರ್ತನೆ ಆಗಬೇಕು; ಇದು ದೇಶಾಭಿಮಾನಿಗಳೆಲ್ಲರೂ ತೀವ್ರ ಗಮನಹರಿಸಬೇಕಾದ ಒಂದು ಮುಖ್ಯ ವಿಷಯ, ರಾಜಕಾರಣಿಗಳೂ ಸಮಾಜ ಸೇವಕರೂ, ಶಿಕ್ಷಣವೇತ್ತರೂ ಈ ವಿಷಯದಲ್ಲಿ ಆದಷ್ಟು ಶೀಘ್ರ, ಗಮನ ಹರಿಸಿದಲ್ಲಿ ನಾವು ಸ್ವಾತಂತ್ರ್ಯ ಪಡೆದುದರ ಸತ್ಫಲವನ್ನು ಉಣಬಹುದಾಗಿದೆ.

ತಡವಾಗಿಯಾದರೂ ಈ ವಿಚಾರದಲ್ಲಿ ಗಮನಹರಿಸುವುದು ದೇಶದ ಅಭಿವೃದ್ಧಿಗೆ ಮೂಲವಾಗಿದೆ, ಈ ಎಚ್ಚರ ಬರಲೆಂದು ಹಾರೈಕೆ.

ಸಿದ್ದಗಂಗಾ



# ವಿಜ್ಞಾನ ಮತ್ತು ಧರ್ಮ

- ನರಸಿಂಹಮೂರ್ತಿ, ಪ್ರಶಿಕ್ಷಕರು, ಸಿದ್ಧಗಂಗಾ ಶಿಕ್ಷಕರ ತರಬೇತಿ ಸಂಸ್ಥೆ, ತುಮಕೂರು-2

ನಮಗೆ ತಿಳಿದಿರುವಂತೆ $E = mc^2$ ಎಂಬ ಶಕ್ತಿ ಸೂತ್ರವು ಜೀವನದ ಬಳಕೆಯಲ್ಲಿ ವಸ್ತುವಿನ ನೈಜರೂಪದ ಬಗೆಗೆ ಒಂದು ನಿಶ್ಚಿತ ಜ್ಞಾನವನ್ನೂ, ವಸ್ತುಪ್ರಪಂಚದ ಏಕತೆಯನ್ನೂ ಸೂಚಿಸುತ್ತದೆ. ವಸ್ತುವನ್ನು ಶಕ್ತಿಯಾಗಿಯೂ ಶಕ್ತಿಯನ್ನು ವಸ್ತುವನ್ನಾಗಿಯೂ ಪರಿವರ್ತಿಸಬಹುದೆಂದು ವಿಜ್ಞಾನಿಗಳು ಕಂಡುಕೊಂಡಿದ್ದಾರೆ. ಆದ್ದರಿಂದ ಇವೆರಡೂ ಅವಿನಾಶಿಗಳು. ಇದನ್ನೇ ನಮ್ಮ ಆತ್ಮಜ್ಞಾನದ ಶಕ್ತಿ ಎಂದೂ ತಿಳಿಸಬಹುದು. ಏನೇ ಸಂಶೋಧನೆಗಳನ್ನೂ ನಡೆಸಿದರೂ ಶರೀರ ಧರಿಸಿರುವ ಆತ್ಮ ಎಂದೂ ಅವಿನಾಶಿ ಎಂದು ಹೇಳಬಹುದಲ್ಲವೇ? ನಾವು ಇಂದು ಕಾಣುವ ಅಸಂಖ್ಯ ವಿಷಯಗಳನ್ನು ಕುರಿತ ಅಪಾರ ಜ್ಞಾನರಾಶಿ ಬಂದುದಾದರೂ ಎಲ್ಲಿಂದ? ವಿಶ್ವದ ಒಂದು ವಿರಾಟ್ ಸ್ವರೂಪದೊಂದಿಗೆ ಮನುಷ್ಯನನ್ನು ಹೋಲಿಸಿದಾಗ ಮನುಷ್ಯ ಒಂದು ಧೂಳಿನ ಕಣವೂ ಅಲ್ಲ. ಮನುಷ್ಯ ಶರೀರದ ರಚನೆ, ಅಂಗಾಂಗಗಳ ಕಾರ್ಯವಿಧಾನ, ಪ್ರತಿಯೊಂದು ಜೀವಕೋಶದಲ್ಲಿನ ಸಂಕೀರ್ಣ ಚಟುವಟಿಕೆಯ ವೈಖರಿ ಇವುಗಳನ್ನು ಕಂಡಾಗ ಆಶ್ಚರ್ಯವೆನಿಸುತ್ತದೆ. ಇವೆಲ್ಲವನ್ನೂ ವೀಕ್ಷಿಸುವ ಮಾನವನ ಮನಸ್ಸು ಅದ್ಭುತವಲ್ಲವೇ ?

ವಿಶ್ವವು ತನ್ನ ವಿಸ್ತಾರ ವೈಶಾಲ್ಯಗಳಿಂದ ನನ್ನ ಸ್ಥಾನವನ್ನೂ ಒಂದು ಸೂಜಿ ಮೊನೆಯಷ್ಟು ಜಾಗಕ್ಕೆ ಪರಿಮಿತಗೊಳಿಸಿದೆಯಾದರೂ, ನನ್ನ ಯೋಚನೆಯಮೂಲಕ ಈ ವಿಶ್ವವನ್ನೇ ನಾನು ಅರಿತುಕೊಳ್ಳುತ್ತಿದ್ದೇನೆ ಎಂಬುದು ವಿಜ್ಞಾನಿಯಾದ ಪಾಸ್ಕಲನ ಮಾತು.

**In Space the universe engulfs me and reduces me to *a* pin point. But through thought, I understand that universe–By pascal.**

ಇಂತಹ ಶರೀರವನ್ನು ಹೊಂದಿರುವ ಈ ಮನಸ್ಸಿನ ಅಪಾರ ಶಕ್ತಿಯಿಂದ ಅದು ವರ್ತಿಸುವ ವಿಧಾನದಿಂದ, ಅದು ಅನುಸರಿಸುವ ನಿಯಮಗಳಿಂದ, ಮನಸ್ಸಿನ ಮೂಲಭೂತ ಸ್ವರೂಪ ಸ್ವಭಾವಗಳ ಅನುಭೂತಿಯಿಂದ ಮಾತ್ರ ಮನುಷ್ಯನ ಅಂತರ್ಯದ ಆಳದಲ್ಲಿ ಅಪಾರ ಶಕ್ತಿ ಇದೆ. ಅವನಿಗೆ ಯಾವುದು ಬೇಕೆನಿಸಿದರೂ ಅದನ್ನು ಪಡೆಯಬಲ್ಲ. ಮನುಷ್ಯನ ಪಾಲಿಗೆ ಯಾವುದೂ ಅಸಾಧ್ಯವಲ್ಲ. ಆದರೆ ತನ್ನಲ್ಲಿಯೇ ಶಕ್ತಿ ಇದೆ ಎಂಬುದರಲ್ಲಿ ಅವನಿಗೆ ನಂಬಿಕೆಯಿಲ್ಲ. ಈ ಶಕ್ತಿಯನ್ನು ಹೊರಗೆಡಹುವುದು ಹೇಗೆ ಎಂಬುದನ್ನು ಮನುಷ್ಯನು ಬಳಸಿಕೊಂಡಾಗ ಮಾತ್ರ

ಸಾಧ್ಯ. ಈ ಬಳಕೆ ಯಾವರೀತಿ ಮಾಡಬೇಕೆಂಬುದೇ ನಿಯಮ. ಈ ನಿಯಮ ಪಾಲನೆಗೆ ಆಧಾರಗಳು ಮುಖ್ಯವಲ್ಲವೆ? ನಮ್ಮ ಇತ್ತೀಚಿನ ಬೆಳವಣಿಗೆಯಲ್ಲಿ ಈ ಶಕ್ತಿ ನಷ್ಟ ಮಾಡಿಕೊಳ್ಳುವವರೇ ಹೆಚ್ಚು. ಕಾರಣವೇನೆಂಬುದನ್ನು ಹುಡುಕಲು ಹೋದಾಗ ನಮಗೆ ದೊರೆಯುವುದೇ ಆಧಾರ ರಹಿತ ಶಿಕ್ಷಣ. ಅರಿಷಡ್ವರ್ಗಗಳನ್ನು ಗೆಲ್ಲದಿರುವುದು, ಆಸೆ ಆಮಿಷಗಳಕಡೆ ಗಮನ ಹರಿಸುವುದು, ಅಸಂಸ್ಕೃತಿ ಪಾಲನೆ, ಏಕಾಗ್ರತೆಯ ಕೊರತೆ ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ಶ್ರದ್ಧೆಯ ಕೊರತೆ, ಇವೆಲ್ಲವೂ ಕಡಿಮೆಯಾದಾಗ ಅಗೋಚರವಾದ ಶಕ್ತಿ ಕುಂದುವುದರ ಜೊತೆಗೆ ನಷ್ಟವೆಷ್ಟು? ಇತ್ತೀಚಿನ ಶತಮಾನಗಳಿಂದೀಚೆಗೆ ಯಾವಸಂಶೋಧನಾ ಕಾರ್ಯವೂ ನಡೆಯುತ್ತಿಲ್ಲ. ಏನನ್ನು ಹೊಸದೆಂದು ಭಾವಿಸುತ್ತಿದ್ದಾರೆಯೋ ಅದನ್ನೆಲ್ಲಾ ನಮ್ಮ ಪೂರ್ವಜರು, ಋಷಿಮುನಿಗಳು ತಿಳಿದಿದ್ದೇ ಆಗಿರುತ್ತದೆ. ಆರ್ಕಿಮಿಡೀಸ್‌ನಿಗೆ ಮುಂಚೆ ಸಾಪೇಕ್ಷಸಾಂದ್ರತೆ ಇತ್ತು. ನ್ಯೂಟನ್ನನಿಗಿಂತ ಮುಂಚೆ ಗುರುತ್ವಾಕರ್ಷಣೆ ಇತ್ತು. ಸಾಧನೆಗೆ ಇವರುಗಳೇ ಬೇಕಾಯಿತು. ಇತ್ತೀಚಿನ ದಿನಗಳಲ್ಲಿ ನಾವು ಕಂಡಂತೆ ಯಾರಿಂದಲೂ ಸಾಧ್ಯವಿಲ್ಲದ ತ್ರಿವಿಧದಾಸೋಹದ ಕಾರ್ಯ ಒಬ್ಬ ವ್ಯಕ್ತಿಯ ಶಕ್ತಿಯಿಂದಲ್ಲವೇ? ಇದೇನು ಕಣ್ಣು ಮುಚ್ಚಾಲೆ ಆಟವೇ? ದಿನಂಪ್ರತಿ ಐದು ಸಹಸ್ರ ಮಂದಿಗೆ ಅನ್ನ, ವಸತಿ, ಶಿಕ್ಷಣ ಮತ್ತು ಯೋಗಕ್ಷೇಮ ವಿಚಾರ ಮಾಡುವ ಒಬ್ಬರು ಈ ಯುಗದಲ್ಲಿದ್ದಾರೆಂಬುದರ ಬಗ್ಗೆ ಆಶ್ಚರ್ಯವಲ್ಲವೆ? ಈ ಶಕ್ತಿಯನ್ನು ಹೊಂದಬಲ್ಲ ಇನ್ನಾವ ಪುರುಷನು ಸದ್ಯದಲ್ಲಿ ಕಾಣಬಹುದೆಂಬುದನ್ನು ಇನ್ನೂ ಅಗೋಚರವಾಗಿ ಉಳಿದ ಸಂಗತಿಯಾಗಿದೆ. ಈ ಶಕ್ತಿ ಸಂಪಾದನೆಗೆ ಅವರು ಪಾಲಿಸುತ್ತಿರುವ ನಿಯಮಗಳನ್ನು ಬೇರೆಯವರಿಗೆ ತಿಳಿಸಿದರೆ ಯಾರು ಅರಿಯಲು ಶಕ್ತರೋ ಅವರಿಗೆ ಮಾತ್ರ ಸಾಧ್ಯ. ಇಷ್ಟೆಲ್ಲಾ ಶಕ್ತಿಯ ರಚನೆ, ಮಾರ್ಪಾಟು ನಷ್ಟವಾದರೆ ಆಗುವ ಅನಾಹುತಗಳೆಷ್ಟು? ಇಂತಹ ವ್ಯಕ್ತಿಗಳನ್ನೇ ಅವತಾರ ಪುರುಷರೆಂಬುದನ್ನು ಧರ್ಮವು ಹೇಳುತ್ತದೆ. ಯುವಕರಲ್ಲಿ ಬ್ರಹ್ಮಚರ್ಯದ ಕೊರತೆ, ವ್ಯಕ್ತಿಗಳಲ್ಲಿ ವಿವೇಚನಾಶಕ್ತಿ ಕೊರತೆ, ಸ್ತ್ರೀಯರಲ್ಲಿ ಶೀಲಶಕ್ತಿಯ ಕೊರತೆ ಹೆಚ್ಚಾಗುತ್ತಾ ಬಂದಾಗೆಲ್ಲಾ ಸಂಸ್ಕೃತಿಯಕೊರತೆ ಹೆಚ್ಚಾಗಿ ಅಧರ್ಮವು ತಾಂಡವಾಡುತ್ತದೆ. ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಹೇಳಿರುವಂತೆ :

ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ |
ಅಭ್ಯುತ್ಥಾನ ಮ ಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ||

ದೈವೀಶಕ್ತಿಯೆಂಬ ಒಂದು ಅಂಶವು ಕೆಲವಾರು ವ್ಯಕ್ತಿಗಳಿಗೆ ಸೀಮಿತವಾದದ್ದು ಹೇಗೆ? ಈ ಸಂಸ್ಕಾರವನ್ನು ಪಡೆಯಲು ಕಾರಣವೇನು? ಎಂಬುದರ ಬಗ್ಗೆ ಇನ್ನೂ ಮುಂದಿನ ಲೇಖನಗಳಲ್ಲಿ ತಿಳಿಯಬಹುದು.



## ವೈಜ್ಞಾನಿಕ ರಹಸ್ಯದ ಅಂತರಾಳ ಮತ್ತು ಮಿತಿ

ಮನುಷ್ಯನ ರಚನೆ, ಸ್ವರೂಪ ಮತ್ತು ಶಕ್ತಿಗಳನ್ನು ಕುರಿತ ಅನ್ವೇಷಣೆ ಇತ್ತೀಚಿನದು. ಸೂಕ್ಷ್ಮದರ್ಶಕ, ದೂರದರ್ಶಕಗಳ ಮೂಲಕ ನಮ್ಮ ಇಂದ್ರಿಯಗಳಿಗೆ ಗೋಚರವಾಗುವ ಹೊರಜಗತ್ತಿನ ಅಸಂಖ್ಯ ಸೂಕ್ಷ್ಮ ವಿಷಯಗಳನ್ನು ವಿಜ್ಞಾನಿ ಚೆನ್ನಾಗಿ ತಿಳಿದಿರುವುದು ನಿಜವಾದರೂ ನಿರಂತರ ಹೊರಮುಖವಾಗಿ ಹರಿಯುವ ಮನಸ್ಸಿನ ಸ್ವಭಾವವೇ ಅಂತರ್ಜ್ಞಾನದಿಂದ ದೊರೆಯಬಹುದಾದ ಇತರ ಆಯಾಮಗಳನ್ನು ನೋಡದಂತೆ ತಡೆಮಾಡುತ್ತಿದೆ ಎಂಬುದು ತಡವಾಗಿಯಾದರೂ ವಿಜ್ಞಾನಿಗಳಲ್ಲಿ ಅನೇಕರಿಗೆ ತಿಳಿಯುತ್ತಿದೆ.

ಪ್ರಕೃತಿ ರಹಸ್ಯಗಳನ್ನು ಬೇಧಿಸಿ ಅಸಂಖ್ಯ ನೈಸರ್ಗಿಕ ನಿಯಮಗಳನ್ನು ಕಂಡುಹಿಡಿದು ನಾನಾ ರೀತಿಯ ಸುಖ ಸೌಕರ್ಯಗಳನ್ನು ವಿಜ್ಞಾನಿ ನಮಗೆ ಇಂದು ನೀಡಿದ್ದಾನೆ. ಮಾನವನ ಅನ್ವೇಷಣಾ ಬುದ್ಧಿ, ಏರಬಹುದಾದ ಎತ್ತರವನ್ನೂ ಧೀಮಂತಿಕೆಯ ಪರಾಕಾಷ್ಠೆಯನ್ನು ತೋರಿದ್ದಾನೆ ಆದರೂ ಪ್ರಾಮಾಣಿಕತೆ, ನ್ಯಾಯಪರತೆ, ಸಹೋದರಭಾವ ಮತ್ತು ಪರಸ್ಪರ ಅರಿವು ಸಹಕಾರಗಳಿಂದ ಕೂಡಿದ, ಶಾಂತಿ ಸಹನೆಗಳಿಂದ ತುಂಬಿದ, ಸುಂದರ ಜಗತ್ತೊಂದನ್ನು ನಿರ್ಮಿಸಲು ಅವನಿಂದ ಸಾಧ್ಯವಿಲ್ಲವೆಂಬುದನ್ನು ತಿಳಿಯಲಾಗುವುದಿಲ್ಲ. ಇಲ್ಲಿ ಧರ್ಮದ ಪಾತ್ರವೇ ಮುಖ್ಯ.

ಪಂಚಭೂತಗಳನ್ನು ಕೈ ಬೆರಳಿಣಿಕೆಯಲ್ಲಿ ಕುಣಿಸುವ ನೆಲ, ಜಲ, ಆಗಸಗಳಲ್ಲಿ ಅದ್ಭುತ ವೇಗದಿಂದ ಪಯಣಿಸುವ, ಮನುಷ್ಯಕುಲದ ರೋಗರುಜಿನಗಳು ಪಲಾಯನ ಸೂತ್ರಪಠಿಸುವಂತೆ ಮಾಡುವ ವಿಜ್ಞಾನಿ, ಬಾಳಿ ಬದುಕಿ, ಬದುಕಿಬಳಲಿ ಬೀಳಲಿರುವ ಜನರ ಹೃದಯದಲ್ಲಿ ಒಂದು ಬಂಧುತ್ವದ ಭಾವವನ್ನುಂಟುಮಾಡಲು ಸಾಧ್ಯವಿಲ್ಲ. ಉಪನಿಷತ್ತುಗಳಲ್ಲಿ ಪಠಿಸುವ ಶಾಂತಿ ಮಂತ್ರಗಳು ಪಠನ ಮಾಡಲು ಮಾತ್ರ ಇವೆ, ಅರ್ಥವಿಲ್ಲದೇ ಬಾಯಿಯ ಉಚ್ಚಾರಣೆ ಕೃತಿಯಲ್ಲಿಲ್ಲದಿರುದನ್ನೇ ಕಾಣುತ್ತೇವೆ

### ಪರಿಣಾಮಗಳಿಗೆ ಉತ್ತರ

ಪ್ರಗತಿಗಳು ಎರಡು ಕ್ಷೇತ್ರಗಳಲ್ಲಿ ಆಗಬೇಕಾಗಿದೆ. ಅದು ಪ್ರಕೃತಿ ಅಥವಾ ನಿಸರ್ಗದ ಎರಡು ಮುಖಗಳನ್ನು ಕುರಿತಾದುದು.

1) ಬಾಹ್ಯ ಪ್ರಕೃತಿ. 2)ಮಾನವನ ಆಂತರಿಕ ಪ್ರಕೃತಿ.

ಮಾನವನ ಹೊರ ಜಗತ್ತನ್ನು ಕುರಿತಾಗಿದ್ದು ನಮಗೆ ಗೋಚರವಾಗುವಂತಹದ್ದು. ಇನ್ನೊಂದು ಮನುಷ್ಯನ ಅಂತರಂಗವನ್ನು ಕುರಿತಾದದ್ದು. ವಾತಾವರಣ ಅಥವ

ಪರಿಸರದ ಹಿಡಿತಗಳಿಂದ ಬಿಡಿಸಿಕೊಳ್ಳುವ ಶಕ್ತಿ ಮತ್ತು ಸ್ವಾತಂತ್ರ್ಯ ವೃದ್ಧಿಯಾದರೆ, ವ್ಯಕ್ತಿಯ ಪಾಲಿಗೆ ಪರಿಸರದ ಮೇಲೆ ಹೆಚ್ಚು ನಿಯಂತ್ರಣ ಸಾಧ್ಯವಾದರೆ, ನಾವು ಕಾಣುವ ಬದಲಾವಣೆ ಪ್ರಗತಿಯತ್ತ ಸಾಗಿದೆ ಎನ್ನಬಹುದು ಈ ದೃಷ್ಟಿಯಿಂದ ಬಾಹ್ಯಪ್ರಕೃತಿಯನ್ನು ನಿಗ್ರಹಿಸಲು ಆ ವಿಜ್ಞಾನದ ಅಸಂಖ್ಯ ಶೋಧನೆಗಳು ನಮಗೆ ಅಪಾರ ಸಹಾಯವನ್ನು ಕೊಡುತ್ತವೆ. ಎಲ್ಲಾ ಸಂಪತ್ತುಗಳನ್ನು ಹೊಂದಿದ್ದು ಆರೋಗ್ಯವೇ ಇಲ್ಲದಾಗ ಮಾನಸಿಕವಾಗಿ ನೆಮ್ಮದಿಯಿರುತ್ತದೆಯೇ, ಇತ್ತೀಚಿನ ದಿನಗಳಲ್ಲಿ ಅನೇಕ ಸಂಸಾರಗಳಲ್ಲಿ ವ್ಯಕ್ತಿಗಳು ಮಾತನಾಡುವುದನ್ನು ಕಾಣುವುದು ಈ ರೀತಿ ಇದೆ. ಸಿಹಿ ಮೂತ್ರ ರೋಗಿಗಳು ಅನ್ನ ಅಥವಾ ಸಿಹಿ ಪದಾರ್ಥವನ್ನು ತಿನ್ನಬಾರದೆಂದು ಪಥ್ಯದಲ್ಲಿರುವಾಗ ಎಷ್ಟೇ ಇದ್ದರೂ ರಾಗಿ ಮುದ್ದೆಯೇ ಅವನಿಗೆ ಆರೋಗ್ಯಕೊಡಬೇಕು. ಚಿಕ್ಕಂದಿನಲ್ಲಿ ತಿರಸ್ಕಾರ ಮಾಡುವ ವಸ್ತುಗಳು ವಯಸ್ಸಾಗುತ್ತಾ ಪ್ರಯೋಜನಕ್ಕೆ ಬರುತ್ತವೆ. ಹೊರಗಿನ ಯಾವತ್ತೂ ಸುಖಸಾಧನಗಳು ಇಂತಹವರ ಪಾಲಿಗೆ ಅರ್ಥಹೀನವಲ್ಲವೆ. ಪ್ರಸಿದ್ಧ ಬೆಲ್ಜಿಯಂಲೇಖಕ ನೊಬೆಲ್ ಪ್ರಶಸ್ತಿ ವಿಜೇತ ಮಾರೀಸ್ ಮೆಟರ್‌ಲಿಂಕ್ ಒಂದು ಮಾತನ್ನು ತನ್ನ "The Great Beyond" ಎನ್ನುವ ಗ್ರಂಥದ ಪೀಠಿಕೆಯಲ್ಲಿ ಹೇಳುತ್ತಾನೆ— ಅತಿದೊಡ್ಡ ಎಂಜಿನಿಯರ್, ಗಣಿತಜ್ಞ, ವೈದ್ಯ ಅಥವ ಆಕಾಶ ವಿಜ್ಞಾನಿಯೂ ಕೂಡ ಶೋಷಕನೂ, ಮಹಾಮೂರ್ಖನೂ ಆಗಬಲ್ಲ ಎಂಬುದನ್ನು ಜನ ಗಮನಿಸುತ್ತಿಲ್ಲ. ವ್ಯಕ್ತಿಯ ಅಂತರಿಕ ಪರಿಸರದ ಮಾಲಿನ್ಯದ ಭೂಮ ರೂಪವೇ ಜನಾಂಗದ ಪತನಕ್ಕೆ ಕಾರಣವಾಗುತ್ತಿದೆ. ಜಗತ್ತಿನ ಸುಮಾರು 21 ನಾಗರೀಕತೆಗಳಲ್ಲಿ 19 ನಾಗರೀಕತೆಗಳು ಹಾಳಾದುದು ಬಾಹ್ಯ ಆಕ್ರಮಣಗಳಿಂದಲ್ಲ, ಆಂತರಿಕ ನೈತಿಕ ಕುಸಿತದಿಂದ ಎಂದು ಪ್ರಸಿದ್ಧ ಇತಿಹಾಸಕಾರ ಅರ್ನಾಲ್ಡ್ ಟೋಯ್ನಬೀ ಹೇಳಿದ್ದಾರೆ.

ಮನಸ್ಸಿನ ಅಸಾಮಾನ್ಯ ಶಕ್ತಿಗಳ ಬಗೆಗೆ ದೀರ್ಘಕಾಲದಿಂದ ಅಧ್ಯಯನ, ಪ್ರಯೋಗ ಮತ್ತು ಸಂಶೋಧನೆಗಳನ್ನು ಮಾಡುತ್ತಾ ಬಂದಿದ್ದ ಅಮೆರಿಕಾದ ಡ್ಯೂಕ್ ವಿಶ್ವವಿದ್ಯಾಲಯದ ಡಾ|| ಜೆ. ಬಿ. ರೈನ್ ಸುಮಾರು ನಲವತ್ತು ವರ್ಷಗಳ ಹಿಂದೆಯೇ ಹೇಳಿದ್ದ ಮಾತುಗಳಿವು - ದೇಶಕಾಲಗಳನ್ನು ಮೀರಿಹೋಗುವ ಶಕ್ತಿ ಮನಸ್ಸಿಗಿದೆ. ಅದು ಸಾಮಾನ್ಯ ಭೌತಿಕ ನಿಯಮಗಳ ಅಧೀನವಲ್ಲ. ಮನಸ್ಸನ್ನು ಭೌತಿಕ ವಸ್ತು ಎನ್ನುವುದಕ್ಕಿಂತ ಅಭೌತಿಕ ಅಥವಾ ಆತ್ಮಸಂಬಂಧಿಯಾದ ತತ್ವ ಎನ್ನಬೇಕಾಗುತ್ತದೆ. ○

---

**❀ ಸುಭಾಷಿತ ❀**

ಒಳಗೆ ಕಶ್ಮಲದಿಂದ ಕೂಡಿರುವ ದುಷ್ಟನು ನೂರಾರು ತೀರ್ಥಸ್ನಾನಗಳಿಂದಲೂ ಶುದ್ಧನಾಗುವುದಿಲ್ಲ.

ಸಮಯಯೋಜಿತ ಪದ್ಯಮಾಲಿಕಾ.

# ಶ್ರೀ ಸಿದ್ಧರಾಮೇಶ್ವರನ ಬದುಕು ನಮಗಿಂದು ದಾರಿದೀಪ

ಶಿವಾನಂದ ಗುರೂಜಿ, ಶ್ರೀ ಬಸವಗುರುಕುಲ (ರಿ) ಕುಂಬಳೂರು–577530

ಹನ್ನೆರಡನೆ ಶತಮಾನದ ಶರಣರ ಅಥವ ಸಮಕಾಲೀನ ಶರಣರ ನಿರ್ಧಿಷ್ಟ ಇತಿಹಾಸ ದೊರೆಯದೆ ಅನೇಕ ಸಂಗತಿಗಳು ಭೂಗತವಾಗಿವೆ. ಆ ಶತಮಾನದ ಇತಿಹಾಸಕಾರರು ಇತಿಹಾಸ ವ್ಯಕ್ತಿಗಳನ್ನು ಪೌರಾಣಿಕ ಕಲ್ಪನೆಯಲ್ಲಿ, ದೈವಾಂಶ ಸಂಭೂತರಂತೆ ಚಿತ್ರಿಸಿದರು. ಮೊಟ್ಟ ಮೊದಲನೆಯ ರಗಳೆಯ ಕವಿ ಹರಿಹರನೇ ಎಲ್ಲಾ ಶರಣರ ಜೀವನವನ್ನು ದೈವಾಂಶ ಸಂಭೂತರೆಂದೇ ಚಿತ್ರಿಸಿದ್ದಾನೆ. ಕೈಲಾಸದ ವರ್ಣನೆಯೊಂದಿಗೆ ಎಲ್ಲಾ ಶರಣರ ಜೀವನ ಪ್ರಾರಂಭವಾಗುವುದು. ಹರಿಹರನು ತನಗಿಂತ ನಲವತ್ತು ಐವತ್ತು ವರ್ಷಗಳ ಹಿಂದಿನ ಇತಿಹಾಸವನ್ನು ಇದ್ದಕ್ಕಿದ್ದಂತೆ ಬರೆಯಲು ಮನಸ್ಸು ಮಾಡಿದ್ದರೆ ಇಂದಿನ ಹಲವಾರು ಸಂಶಯಾಸ್ಪದ ವಿಷಯಗಳಿಗೆ ಎಡೆಯೇ ಇರುತ್ತಿರಲಿಲ್ಲ. ತನಗಿಂತ ಹಿರಿಯರಾದ (50 ವರ್ಷಕ್ಕೂ ಮೇಲ್ಪಟ್ಟ)ವರನ್ನು ಕಂಡು ಶರಣರ ಸಹಜ ಹುಟ್ಟು, ಬೆಳವಣಿಗೆ ವಿದ್ಯಾಭ್ಯಾಸ ಹೋರಾಟದ ಬದುಕು ಹಾಗು ನಿರ್ಧಿಷ್ಟ ಅಂತ್ಯಗಳ ಕುರಿತು ಹರಿಹರ ವಿಷಯ ಸಂಗ್ರಹಿಸಿದ್ದರೆ ಮಹದುಪಕಾರವಾಗುತ್ತಿತ್ತು. ಅದಾಗಲಿಲ್ಲ. ನಂತರದ ಕವಿಗಳು ಹರಿಹರನನ್ನೇ ಅನುಸರಿಸಿದ್ದಾರೆ. ಹೀಗಾಗಿ ಶರಣರ ಜೀವನ ಕುರಿತು ಹೇಳುವುದೆಂದರೆ ಬಹು ಕ್ಲಿಷ್ಟ. ನಿಜವಾದ ಇತಿಹಾಸ ದೊರೆಯದೆ ಕಾಲ್ಪನಿಕ ಸಂಗತಿಗಳೇ ಹೆಚ್ಚಾದವು. ಎಲ್ಲ ಶರಣರ ವಚನಗಳಲ್ಲಿ ಪ್ರಕ್ಷಿಪ್ತ ವಚನಗಳೂ ಸೇರ್ಪಡೆಯಾದವು. ಇದರಿಂದಲೂ ನಮಗೆ ಸ್ಪಷ್ಟವಾದ ಶರಣರ ಜೀವನ ದೊರೆಯದೆ ಹೋಯಿತು. ಈ ಹಿನ್ನೆಲೆಯಲ್ಲಿ ಸಿದ್ಧರಾಮ ಶಿವಯೋಗಿಯ ನೈಜ ಚಿತ್ರಣ ನಮಗೆ ಲಭ್ಯವಾಗದೆ ಅನೇಕ ಕಾಲ್ಪನಿಕ ವಿಚಾರಗಳೇ ಸತ್ಯ ಸಂಗತಿಯಂತೆ, ಕವಿಯಿಂದ ಬರೆಯಲ್ಪಟ್ಟಿವೆ. ಸಾವಿರಾರು ಪ್ರಕ್ಷಿಪ್ತ ವಚನಗಳು ಸಿದ್ಧರಾಮ ಶಿವಯೋಗಿಗಳ ವಚನಗಳಲ್ಲೂ ಸೇರ್ಪಡೆಯಾಗಿವೆ. ಈ ಹಿನ್ನೆಲೆಯಲ್ಲಿ ಕೆಲವರು ಸಿದ್ಧರಾಮಣ್ಣನಿಂದ ಚನ್ನಬಸವಣ್ಣನಿಗೆ ದೀಕ್ಷೆಯಾಗಿದೆ ಎಂದು ಬರೆದು ಪ್ರಕಟ ಪಡಿಸಿದ್ದಾರೆ. ಕಳೆದ ವರ್ಷ ದಾವಣಗೆರೆಯಲ್ಲಿ ನಡೆದ ಸಿದ್ಧರಾಮೇಶ್ವರ ಜಯಂತಿಯಲ್ಲಿ ಸ್ಮರಣ ಸಂಚಿಕೆಯೊಂದನ್ನು ಬಿಡುಗಡೆ ಮಾಡಲಾಗಿತ್ತು. ಅದರಲ್ಲಿ ಚನ್ನಬಸವಣ್ಣನಿಗೆ ಸಿದ್ಧರಾಮಣ್ಣನೇ ದೀಕ್ಷೆ ನೀಡಿರುವುದಾಗಿ ವರ್ಣಿಸಲ್ಪಟ್ಟಿದೆ, ಇದು ಸತ್ಯಕ್ಕೆ ದೂರವಾದ ಸಂಗತಿ. ಪ್ರಕ್ಷಿಪ್ತ ವಚನಗಳನ್ನು ಬಿಟ್ಟು ಉಳಿದ ವಚನಗಳಲ್ಲಿ ಸ್ವತಃ ಸಿದ್ಧರಾಮಣ್ಣನವರೇ ತನ್ನಗುರು ಚೆನ್ನಬಸವಣ್ಣನೆಂದು ಅನೇಕ ವಚನಗಳ ಮೂಲಕ ಸ್ತುತಿಸಿದ್ದಾರೆ.

ಶುದ್ಧವನರಿದೆ ಚೆನ್ನಬಸವಣ್ಣ ನಿಮ್ಮಿಂದೆ ಸಿದ್ಧವನರಿದೆ ಚೆನ್ನಬಸವಣ್ಣ ನಿಮ್ಮಿಂದೆ,
ಪ್ರಸಿದ್ಧವನರಿದೆ ಚೆನ್ನಬಸವಣ್ಣ ನಿಮ್ಮಿಂದೆ. ಚೆನ್ನಬಸವಣ್ಣ ಗುರುವಾಗಿ ಬಂದು
ಎನ್ನ ಜನ್ಮ ಕರ್ಮವ ನಿವೃತ್ತಿ ಮಾಡಿದನು ಬದುಕಿದೆನಯ್ಯಾ,
ಗುರುವೇ ಕಪಿಲ ಸಿದ್ಧ ಮಲ್ಲಿಕಾರ್ಜುನಾ.
ಬಿನ್ನಣದ ದೇಹವನು ತನ್ನಂತೆ ಮಾಡಿದನು
ಉನ್ನತೋನ್ನತ ಲಿಂಗವ ತೋರಿಸಿದನು
ಎನ್ನ ಫಲಪದಕೀಗ ಹೊದ್ದಲೀಯದ ಹಾಂಗೆ
ಮಾಡಿದ ಗುರು ಚೆನ್ನಬಸವ ಯೋಗಿನಾಥ.

ಇಂತಹ ಹಲವಾರು ವಚನಗಳಿಂದ ಸಿದ್ಧರಾಮಣ್ಣನಿಗೆ ದೀಕ್ಷೆನೀಡಿದ ಗುರು ಯಾರೆಂಬುದನ್ನು ತಿಳಿಯಬಹುದಾಗಿದೆ. ಈ ವಿಚಾರವನ್ನು ಅನೇಕ ವಿದ್ವಾಂಸರು ಸಂಶಯಕ್ಕೆ ಎಡೆಯಿಲ್ಲದಂತೆ ಸಿದ್ಧರಾಮೇಶ್ವರರ ದೀಕ್ಷಾಗುರು ಚನ್ನಬಸವಣ್ಣನೆಂದೇ ಪ್ರತಿಪಾದಿಸಿದ್ದಾರೆ. ಹೀಗೆ ಕೆಲವು ಐತಿಹಾಸಿಕ ಘಟನೆಗಳು ಸಿದ್ಧರಾಮೇಶ್ವರರ ವಚನಗಳಿಂದಲೇ ದೊರೆಯುವುದರಲ್ಲಿ ಅನುಮಾನವಿಲ್ಲ. ಇಂತಹ ವಚನಗಳಲ್ಲಿ ಸಿದ್ಧರಾಮಣ್ಣನವರು ಧರ್ಮ, ಆಧ್ಯಾತ್ಮ, ಕುಟುಂಬ ಹಾಗೂ ಸಮಾಜದ ನೈತಿಕ ಮೌಲ್ಯಗಳ ವಿಚಾರಗಳನ್ನು ಚಿಂತನ ಮಾಡಿರುವುದು ಬಹು ಸ್ಪಷ್ಟವಾಗಿ ತಿಳಿದು ಬರುವುದು. ನಾನಿಲ್ಲಿ "ನಮ್ಮ ಬದುಕಿಗೆ ಸಿದ್ಧರಾಮೇಶ್ವರರ" ಸಂದೇಶ ಕುರಿತು ವಿವೇಚಿಸಲಿದ್ದೇನೆ: ನಮ್ಮ ಬದುಕಿಗೆ ಪೌರಾಣಿಕ ಕಲ್ಪನೆಯ ಸಿದ್ಧರಾಮೇಶ್ವರರಿಗಿಂತ ಇತಿಹಾಸಬದ್ಧ ಸಿದ್ಧರಾಮೇಶ್ವರರು ಹೇಗೆ ಹತ್ತಿರವೆಂಬುದನ್ನು ತಿಳಿಯೋಣ. ಆಮೂಲಕ ಸಿದ್ಧರಾಮೇಶ್ವರನ ಜೀವನ ಸಂದೇಶ ದೀವಿಗೆಯನ್ನು ಹಿಡಿದು ಹೊರಡೋಣ. ಆ ದೀವಿಗೆಯ ಮಹಾ ಬೆಳಗಿನಲ್ಲಿ ನಾವು ನೀವೆಲ್ಲ ಜೇತರಿಸಿಕೊಂಡು, ಕಂದಾಚಾರ-ಸಂಪ್ರದಾಯಗಳ ಕಪಿಮುಷ್ಟಿಯಿಂದ ಬಿಡುಗಡೆ ಹೊಂದೋಣ. ಸತ್ಯದ ಬೆಳಕನ್ನು ಕಂಡುಕೊಂಡು ಆಚರಣೆಯಲ್ಲಿ ತರಲು ಸಿದ್ಧರಾಗೋಣ. ಅಂದರೆ ಮಾತ್ರ ಭವಬಂಧನದಿಂದ ಬಿಡುಗಡೆಯಾಗಲು ಸಾಧ್ಯವಾದೀತು. ಇದೀಗ ಹೊಸದುರ್ಗದಲ್ಲಿ ಸ್ಮರಣ ಸಂಚಿಕೆಯನ್ನು ಹೊರತಂದ ಪ್ರಯತ್ನ ಸಫಲವಾದೀತು.

ಶಿವಯೋಗಿ ಸಿದ್ಧರಾಮೇಶ್ವರನ ಜೀವನದಲ್ಲಿ ಎರಡು ಘಟ್ಟಗಳನ್ನು ಕಾಣುತ್ತೇವೆ. ಮೊದಲ ಘಟ್ಟದಲ್ಲಿ ಬಾಲ್ಯ ಜೀವನದಿಂದ ಪ್ರಭುದೇವರು ಭೇಟಿಯಾಗುವವರೆಗಿನ ಕಾಲ. ಮತ್ತೊಂದು ಬಸವಾದಿ ಶಿವಶರಣರ ಸಂಪರ್ಕ. ಸಿದ್ಧರಾಮೇಶ್ವರನ ಬಾಲ್ಯ ಜೀವನ: ಮಲ್ಲಯ್ಯನೆಂಬ ಯೋಗಿಯ ಸಂಪರ್ಕದಿಂದ ಭಾಲಕನಲ್ಲಿ ಆದ ಬದಲಾವಣೆಯ ಕಥೆ; ಎಂದೂ ಮಾತನಾಡದ ಬಾಲಕ ಮಲ್ಲಯ್ಯನನ್ನು ಕಾಣುತ್ತಲೆ ಮಾತಿಗಾರಂಭಿಸಿದ ವಿಷಯ ತಿಳಿದ ತಾಯಿ ಹರ್ಷಪಡುತ್ತಾಳೆ. ನಾವಿಲ್ಲಿ ತಿಳಿಯುವ ಅಂಶವೆಂದರೆ-



ಬಾಲಕನ ಜೀವನದಲ್ಲಿ ಒಂದು ಹೊಸ ತಿರುವಿಗೆ ಕಾರಣವೆಂದರೆ ತನ್ನ ಅಂತರಂಗದ ಆಧ್ಯಾತ್ಮದ ಹಸಿವನ್ನು ಹಿಂಗಿಸುವ, ಪೂರೈಸುವ ಯೋಗಿಯೊಬ್ಬ ದೊರೆತದ್ದು. ಶ್ರೀಶೈಲವನ್ನು ಹೊಕ್ಕ ಬಾಲಕನು ತನಗೆ ಮಾರ್ಗದರ್ಶನ ನೀಡಬಲ್ಲ ಮಲ್ಲಯ್ಯನನ್ನು ಕಾಣದೆ ದುಃಖಿತನಾದ. ಆ ಯೋಗಿ ಸಿಕ್ಕಲಿಲ್ಲವೆಂದ ಮೇಲೆ ತನ್ನ ಜೀವನ ಸಾಧನೆ ನಿಂತಂತೆ. ಬದುಕಿ ಪ್ರಯೋಜನವೇನು? ಎಂಬ ಭಾವನೆ ಸುಮಾರು 15 ವರ್ಷದ ಬಾಲಕನಲ್ಲಿ ಬಂದಿರಬೇಕು. ಅಂತೆಯೆ ಸಿದ್ಧರಾಮ ಬಾಲಕ ಕಮರಿಯೊಂದರಲ್ಲಿ ಕೊನೆ ಉಸಿರನೊಂದಿಗೆ ಶಿವನ ಮಡಿಲ ಸೇರಬೇಕೆಂದು ಸಂಕಲ್ಪ ಮಾಡುತ್ತಾನೆ ಸೊನ್ನಲಾಪುರದಿಂದ ಬುತ್ತಿಯೊಂದಿಗೆ ಯೋಗಿಯನ್ನು ಅರಸುತ್ತ ಹೊರಟ ಸಿದ್ಧ-ರಾಮೇಶ್ವರನನ್ನು ಮಲ್ಲಯ್ಯ ಯೋಗಿ ಕಾಣದಂತೆ ಇದ್ದುಕೊಂಡೆ ಶ್ರೀಶೈಲದವರೆಗೂ ಬೆಂಬತ್ತಿದ್ದಾನೆ. ಬಾಲಕನ ಆಧ್ಯಾತ್ಮ ಚಿಂತನ ಬರೀ ತೋರಿಕೆಯದೋ ಅಥವಾ ಸಹಜವಾದುದೋ ಎಂಬುದನ್ನು ಅರಿಯಲೆಂದೇ ಬೆಂಬತ್ತಿದ್ದಾನೆ. ಬಾಲಕ ಸಿದ್ಧರಾಮನಿಗೆ ಇದು ತಿಳಿಯದು. ಕಮರಿಯ ಬಳಿಗೆ ಬಂದ ಸಿದ್ಧರಾಮೇಶ್ವರನ ಅನತಿ ದೂರದಲ್ಲೆ ಆ ಯೋಗಿ ಅಡಗಿದ್ದಾನೆ. ಬಾಲಕ ದುಃಖಿಸುತ್ತ-ತನಗೆ ಮಾರ್ಗದರ್ಶಕನಾಗ ಬಹುದೆಂದು ತಿಳಿದಿದ್ದ ಯೋಗಿನಾಥ ಇನ್ನಿಲ್ಲ. ತಾನು ಬದುಕಿ ಸಾರ್ಥಕವೇನು?" ಎಂದು ಬಡ-ಬಡಿಸುತ್ತ ಕೈಮುಗಿದು ಇನ್ನೇನು ಕಮರಿಯಲ್ಲಿ ಹಾರಬೇಕು-ಅಷ್ಟರಲ್ಲಿ ಅಲ್ಲೆ ಅವಿತಿದ್ದ ಯೋಗಿ ಓಡಿ ಬಂದವನೆ ಬಾಲಕನನ್ನು ಅಪ್ಪಿಕೊಳ್ಳುತ್ತಾನೆ. ಪೌರಾಣಿಕ ಕಲ್ಪನೆಯಂತೆ ಆಕಾರದ ಶಿವ ಬಂದು ರಕ್ಷಿಸುತ್ತಾನೆ ಎಂಬ ಸಂಗತಿಗಿಂತ ಸಹಜ ಘಟನೆ ನಾನಿಲ್ಲಿ ವಿಚಾರ ಮಾಡಿದ್ದೇನೆ. ಸಿದ್ಧರಾಮ ಯಾರದೋ ಅಪ್ಪುಗೆಗೆ ಆಶ್ಚರ್ಯಪಟ್ಟು ಕಣ್ಣುತೆರೆಯುತ್ತಾನೆ. ತಾನು ಕನಸು ಕಾಣುತ್ತಿರುವೆನೋ ಇಲ್ಲ ಸಹಜವೊ ಎಂಬಂತೆ ಮಲ್ಲಯ್ಯನನ್ನು ನೋಡುತ್ತಾನೆ. ಆನಂದದ ಬಾಷ್ಪಗಳು ಉದುರುತ್ತವೆ. ಹುಸಿ-ಮುನಿಸಿನಿಂದ" "ಹೀಗೇಕಯ್ಯ ನನ್ನ ಕಾಡಿದೆ. ಬುತ್ತಿತರಲು ಹೇಳಿ ಎತ್ತ ಹೋಗಿದ್ದಿ? ನನ್ನ ಅಂತರಂಗದ ಹಸಿವನ್ನು ಹಿಂಗಿಸದೆ? ಎಂದು ಹಲುಬುತ್ತಾನೆ. ಅದಕ್ಕೆ ಉತ್ತರವಾಗಿ ಪರೀಕ್ಷಿಸಿದಲ್ಲದೆ ಯೋಗಿಯ ಆಶೀರ್ವಾದ ದೊರೆಯದು. ಅಂತಹ ಪರೀಕ್ಷೆಯಲ್ಲಿ ನೀನು ಗೆದ್ದಿರುವೆ. ನಾನು ಸಾಧಿಸಿದ ಸಿದ್ಧಿ-ತಪಶ್ಶಕ್ತಿಯನ್ನೆಲ್ಲ ಧಾರಣ ಮಾಡುವ ಭೂಮಿಕೆ ನಿನ್ನಲ್ಲಿದೆ ಎಂಬುದನ್ನು ಕಂಡುಕೊಂಡೆ. ಇನ್ನು ತಡವೇಕೆ?_ ನಡೆ ಒಂದು ಪ್ರಶಾಂತ ತಾಣಕ್ಕೆ ಹೋಗೋಣವೆಂದು ಯೋಗಿನಾಥ ನುಡಿದ. ಇಬ್ಬರೂ ಪಾತಾಳಗಂಗೆಯಲ್ಲಿಳಿದು ಸ್ನಾನಮಾಡಿ ಒಂದೆಡೆ ಕುಳಿತರು. ಮಲ್ಲಯ್ಯನೆಂಬ ಯೋಗಿನಾಥ ತನ್ನ ಇಳಿವಯಸ್ಸಿನಲ್ಲಿ ಸಿದ್ಧಪುರುಷನಾಗಬಲ್ಲ ಯುವ ಬಾಲಕ ದೊರೆತನೆಂದು ಅತ್ಯಾನಂದದಲ್ಲಿ ಮುಳುಗಿದ. ಸ್ವಲ್ಪ ಹೊತ್ತು ಧ್ಯಾನಾಸಕ್ತನಾಗಿ ತನ್ನ ಹಸ್ತವನ್ನು ಬಾಲಕ ಸಿದ್ಧರಾಮೇಶ್ವರನ ಮಸ್ತಕದಲ್ಲಿರಿಸಿ ತನ್ನ ಎಲ್ಲ ಸಿದ್ಧಿ-ತಪಶ್ಶಕ್ತಿಯನ್ನು ಹರಿಸಿದ. ಇನ್ನು ನೀನು ಸೊನ್ನಲಾಪುರಕ್ಕೆ ತೆರಳಿ ಜನಸೇವೆಯೊಂದಿಗೆ ಸಾಧನೆಯಲ್ಲಿ ತೊಡಗೆಂದು ಹರಸಿ ಬೀಳ್ಕೊಟ್ಟನು. ಆಗ ಬಾಲಕನಲ್ಲಿ ಆದಾವುದೋ

ಮಹಾನ್‌ಶಕ್ತಿ ತನ್ನಲ್ಲಿ ಸೇರಿದುದನ್ನು ಗ್ರಹಿಸಿ ಹರ್ಷಿತನಾದ. ಯೋಗಿನಾಥನಲ್ಲಿ ಪೊಡಮಟ್ಟು ಗುರುವಿನ ಆಜ್ಞೆಯಂತೆ ನಡೆಯುವೆನೆಂದು ಭಾಷೆಯನಿತ್ತು ಸೊನ್ನಲಾಪುರಕ್ಕೆ ಬಂದು ಸೇರಿದ ಸಿದ್ಧರಾಮ. ಹೀಗೆ ಸೊನ್ನಲಾಪುರಕ್ಕೆ ಸೇರಿದ ಸಿದ್ಧರಾಮ. ಸಾಧನೆಯೊಂದಿಗೆ ಜನಸೇವಾ ಕಾರ್ಯದಲ್ಲಿ ತನ್ನನ್ನು ತೊಡಗಿಸಿಕೊಂಡ. ಹೀಗೆ ಕೆಲವಾರು ವರ್ಷಗಳು ಉರುಳಿದಮೇಲೆ ಸ್ವಲ ಅಹಂಕಾರ ತೋರಿ ಬಂದಿದೆ ಸಿದ್ಧರಾಮನಲ್ಲಿ. ಇಂತಹ ಸಮಯದಲ್ಲೇ ಅಲ್ಲಮಪ್ರಭುದೇವರು ಕಾಣಿಸಿಕೊಂಡು ಬುದ್ಧಿವಾದ ಹೇಳಿ, ಅಹಂಕಾರವನ್ನು ನಿರಶನಗೊಳಿಸಿ ಕಲ್ಯಾಣದತ್ತ ಕರೆತರುತ್ತಾನೆ. ಇಲ್ಲಿಗೆ ಸಿದ್ಧರಾಮನ ಒಂದು ಜೀವನ ಘಟ್ಟ ಮುಗಿದಂತಾಗುತ್ತದೆ. ಮುಂದಿನದು ಮಹತ್ತರವಾದ ಘಟ್ಟ.

ಗುರುಬಸವೇಶ್ವರನ ಬಹುಮುಖ ಕ್ರಾಂತಿಯನ್ನು ಅಲ್ಲಮ ಪ್ರಭುವಿನಿಂದ ತಿಳಿದ ಸಿದ್ಧರಾಮ ಪ್ರಭುವಿನೊಂದಿಗೆ ಕಲ್ಯಾಣ ಸೇರುತ್ತಾನೆ. ಪ್ರಭುದೇವರ ಅಗಮನದಿಂದ ಬಸವಾದಿ ಶಿವಶರಣರು ಹರ್ಷಿತರಾಗುತ್ತಾರೆ. ಸಿದ್ಧರಾಮನ ಸಿದ್ಧಿ ಸಾಧನೆಯನ್ನು ತಿಳಿಸಿದ ಪ್ರಭು ದೀಕ್ಷೆ ನೀಡುವಂತೆ ಬಸವಣ್ಣನವರಿಗೆ ಹೇಳುತ್ತಾರೆ. ಆಗ ಬಸವೇಶ್ವರರು ಚಿನ್ಮಯಜ್ಞಾನಿ ಚೆನ್ನಬಸವಣ್ಣನಿಂದ ಸಿದ್ಧರಾಮೇಶ್ವರರಿಗೆ ದೀಕ್ಷೆ ಕೊಡಿಸುತ್ತಾನೆ. ಅಂತರಂಗ ಸಾಧನೆಗೆ ತೊಡಗಿಸುತ್ತಾನೆ. ತನಗೆ ಗುರುವಾದ ಚೆನ್ನಬಸವಣ್ಣನ ಕಾರ್ಯದಲ್ಲಿ ಸಿದ್ಧರಾಮ ನೆರವಾಗುತ್ತಾನೆ. ಚೆನ್ನಬಸವಣ್ಣನು ಶರಣರ ವಚನಗಳ ಪರಿಷ್ಕರಣ ಕಾರ್ಯದಲ್ಲಿ ತೊಡಗಿರುವಾಗ ಸಿದ್ಧರಾಮಣ್ಣನೂ ಸೇರಿ ಸಹಕರಿಸುತ್ತಾನೆ. ಇಂತಹ ಸನ್ನಿವೇಶದಲ್ಲಿ ಎಲ್ಲ ಶರಣರ ವಚನಗಳನ್ನು ಓದುತ್ತ ಓದುತ್ತ ಅವುಗಳಲ್ಲಿನ ಆರ್ಥಿಕ, ಸಾಮಾಜಿಕ ಚಿಂತನವನ್ನು, ಆಧ್ಯಾತ್ಮದ ನಿಲುವನ್ನು ಕಂಡು ಮೂಕವಿಸ್ಮಿತನಾಗುತ್ತಾನೆ ಸಿದ್ಧರಾಮ. ತಾನೂ ಅಂತರ್ಮುಖಿಯಾಗಿ ಆಲೋಚನಾ ಪರವಶನಾಗಿ ವಚನಗಳ ರಚನೆಗೆ ತೊಡಗುತ್ತಾನೆ. ಹೀಗೆ ವಚನಗಳನ್ನು ಬರೆಯುತ್ತ ಒಂದು ಹಂತದಲ್ಲಿ—

"ಅರವತ್ತೆಂಟು ಸಹಸ್ರ ವಚನಗಳನ್ನು ಹಾಡಿ ಹಾಡಿ
ಸೋತಿತೆನ್ನ ಮನ ನೋಡಯ್ಯ.
ಹಾಡುವುದೊಂದೇ ವಚನ ನೋಡುವುದೊಂದೇ ವಚನ,
ವಿಷಯ ಬಿಟ್ಟು ನಿರ್ವಿಷಯವಾಗುವದೊಂದೇ ವಚನ
ಎಂದು ಉದ್ಗರಿಸಿದ್ದಾನೆ.

ನಾನೀಗ ಅವರ ಅನೇಕ ವಚನಗಳಲ್ಲಿ ನಾಲ್ಕಾರು ವಚನಗಳ ಮೂಲಕ ಸಿದ್ಧರಾಮೇಶ್ವರರು ಲಿಂಗವಂತ ಧರ್ಮೀಯರಿಗೆ ಹಾಗೂ ಕುಟುಂಬ ಸಮಾಜ ಹಾಗು ರಾಷ್ಟ್ರಕ್ಕೆ ನೀಡಿದ ಸಂದೇಶವನ್ನು ಕುರಿತು ಒಂದೆರೆಡು ಮಾತನ್ನು ನಿವೇದಿಸಿಕೊಳ್ಳುತ್ತಿದ್ದೇನೆ.



ಮಾಡಬಾರದ ನೇಮವ ಮಾಡಿ ಕೆಡದಿರಾ ಮನವೇ
ಮಾಡುವ ನೇಮ, ಮಾಡಬಾರದ ನೇಮಂಗಳವು
ಭೂತ ಭವಿಷ್ಯ ವರ್ತಮಾನಂಗಳವು
ಮಾಡುವ ನೇಮಂಗಳು ನಿತ್ಯ ಲಿಂಗಾರ್ಚನೆ ಜಂಗಮ ದಾಸೋಹವೆಂದು
ಕಪಿಲಸಿದ್ಧ ಮಲ್ಲಿಕಾರ್ಜುನನ ವಚನ, ಮನವೆ

ತಮಗೆ ತಾವೇ ಬುದ್ಧಿಯ ಮಾತುಗಳನ್ನು ಆಡಿಕೊಳ್ಳುತ್ತಲೇ ಸಮಾಜಕ್ಕೆ ಬೋಧಿಸುವ ಕಲೆ ಶ್ರೀ ಬಸವೇಶ್ವರರಿಗೆ ಮೀಸಲಾಗಿದೆ. ಅದನ್ನೆ ಬಳಿವಿಡಿದವರು ಸಿದ್ಧರಾಮೇಶ್ವರರು. ತಮ್ಮ ಮನಕ್ಕೆ ತಾವೇ ಬುದ್ಧಿ ಹೇಳುತ್ತ ಲಿಂಗವಂತ ಸಮಾಜವನ್ನು ಎಚ್ಚರಿಸಿದ್ದಾರೆ. ಸಮಾಜದಲ್ಲಿ ಬಹುಪುರಾತನ ಕಾಲದಿಂದ ನಾನಾ ರೀತಿಯ ನೇಮಗಳು ಹಾಸುಹೊಕ್ಕಾಗಿ ಸೇರಿಕೊಂಡಿವೆ. ಇವುಗಳೇನಿದ್ದರು ಭೂತ, ಭವಿಷ್ಯತ್, ವರ್ತಮಾನಗಳಿಗೆ ಸೀಮಿತವಾದವುಗಳು. ಇಂತಹ ನೇಮಗಳಿಂದ ನಿಜವಾದ ಅಂತರಂಗ ಸಾಧನೆ, ಭವ ಬಂಧನದಿಂದ ಬಿಡುಗಡೆ ಸಾಧ್ಯವಾಗದು. ಅಂತೆಯೇ ಲಿಂಗವಂತ ಸಮಾಜಕ್ಕೆ, ಐಕ್ಯತೆಯ ದೃಷ್ಟಿಯಿಂದಲೂ ಇಷ್ಟಲಿಂಗ ಏಕದೇವೋಪಾಸನೆ ಬಹು ಮುಖ್ಯವೆಂದು ಪ್ರತಿಪಾದಿಸಿದ್ದಾರೆ. ನಿತ್ಯ ಲಿಂಗಾರ್ಚನೆಯೊಂದಿಗೆ ಜಂಗಮ (ಸಮಾಜ, ದೀನದಲಿತರು) ದಾಸೋಹದಲ್ಲಿ ನಿರತರಾಗಬೇಕೆಂದು ಎಚ್ಚರಿಸಿದ್ದಾರೆ. ಅನ್ಯಮಾರ್ಗಗಳೆಲ್ಲ ಕಾಲ ಕರ್ಮಂಗಳಿಗೆ ಒಳಗಾಗುವಂತಹುಗಳು ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ಅವರ ಮತ್ತೊಂದು ವಚನದಲ್ಲಿ ಮೇಲಿನ ಮಾತನ್ನೆ ಮತ್ತಷ್ಟು ಸ್ಪಷ್ಟಪಡಿಸಿರುವುದನ್ನು ಕಾಣುತ್ತೇವೆ. ನೋಡಿ ಆ ವಚನ ಹೀಗಿದೆ.

ಹೊನ್ನು ಬಿಡದನ್ನಕ್ಕ ಗುರುಪಾದೋದಕ ಸಲ್ಲದು.
ಮಣ್ಣು ಬಿಡದನ್ನಕ್ಕ ಲಿಂಗ ಪಾದೋದಕ ಸಲ್ಲದು.
ಹೆಣ್ಣು ಬಿಡದನ್ನಕ್ಕ ಜಂಗಮ ಪಾದೋದಕ ಸಲ್ಲದು.
ಈ ಸರ್ವವೂ ಅಳಿಯದನ್ನಕ್ಕ
ಕಪಿಲಸಿದ್ಧ ಮಲ್ಲಿಕಾರ್ಜುನ ನಿಂಬುಗೊಡನು ಮಹಾಬಯಲಲ್ಲಿ, ಕಲ್ಲಯ್ಯಾ.

ಇಂದಿನ ಅರ್ಥವಿಲ್ಲದ ಹಲವಾರು ಕಂದಾಚಾರಗಳು, ಮೂಢನಂಬಿಕೆಗಳು ನಮ್ಮ ರಾಷ್ಟ್ರದಲ್ಲಿ ತುಂಬಿಬಿಟ್ಟಿವೆ. ಹೀಗಾಗಿ ನಮ್ಮ ರಾಷ್ಟ್ರದಿನದಿಂದ ದಿನಕ್ಕೆ ಹೀನವಾಗುತ್ತಿದೆ. ಎಲ್ಲೆಲ್ಲೂ ಮೋಸ, ವಂಚನೆ, ಕಳವು, ಕೊಲೆ-ಸುಲಿಗೆ ನಡೆದೇ ಇದೆ. ಇದರಿಂದ ರಾಷ್ಟ್ರದ ನೆಮ್ಮದಿಯೇ ಉಳಿದಿಲ್ಲ. ಇಂತಹ ಸ್ಥಿತಿಯಲ್ಲಿರುವ ನಾವು ಸಿದ್ಧರಾಮೇಶ್ವರರ ಒಂದು ವಚನವನ್ನು ನೋಡೋಣ. ಅದು ಹೀಗಿದೆ.

ಒಬ್ಬರ ಮನವ ನೋಯಿಸಿ, ಒಬ್ಬರ ಮನೆಯ ಘಾತವ ಮಾಡಿ,
ಗಂಗೆಯಲಿ ಮುಳುಗಿದಡೇನಾಗುವುದಯ್ಯಾ ?
ಚಂದ್ರನು ಗಂಗೆಯ ತಡೆಯಲಿದ್ದಡೇನು? ಕಲಂಕ ಬಿಡದಾಯತ್ತಯ್ಯಾ
ಅದು ಕಾರಣ ಮನವ ನೋಯಿಸದವನೆ, ಒಬ್ಬರ ಘಾತವ ಮಾಡದವನೆ
ಪರಮಪಾವನ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ

ಇಲ್ಲಿ ಸಿದ್ಧರಾಮೇಶ್ವರರು ಶ್ರೇಷ್ಠ ವ್ಯಕ್ತಿಗಳಾರು ಎಂಬುದನ್ನು ಸುಖ-ಶಾಂತಿ-ನೆಮ್ಮದಿಗಳಿರುವುದೆಲ್ಲಿ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ, ಅವರ ಮತ್ತೊಂದು ವಚನದಲ್ಲಿ—,

ಆರೇನೆಂದಡೂ ಓರಂತಿಪ್ಪುದೇ ಸಮತೆ
ಆರು ಜರಿದವರೆನ್ನ ಮನದ ಕಾಳಿಕೆಯ ಕಳೆದರೆಂಬುದೇ ಸಮತೆ
ಆರು ಸ್ತೌತ್ರ್ಯವ ಮಾಡಿಹರೆನ್ನ ಜನ್ಮ ಜನ್ಮದ ಹಗೆಗಳೆಂಬುದೇ ಸಮತೆ
ಇಂತಿದು ಗುರುಕಾರುಣ್ಯ
ಮನ ವಚನ ಕಾಯದಲ್ಲಿ ಅವಿರತವಿಲ್ಲದಿರ್ದಡೆ
ಕಪಿಲಸಿದ್ಧಮಲ್ಲಿಕಾರ್ಜುನಾ, ನಿನ್ನವರ ನೀನೆಂಬುದೇ ಸಮತೆ

ಎಂದು ಪ್ರತಿಪಾದಿಸಿರುವುದು ನಿಜಕ್ಕು ಪ್ರತಿಕುಟುಂಬದ ವ್ಯಕ್ತಿಗಳ ಕೈಗನ್ನಡಿ. ಸಮತಾ ತತ್ವದ ಕೊರತೆಯಿಂದಲೇ ನಮ್ಮ ಈಗಿನ ಚಿಂತಾಜನಕ ಬದುಕಿಗೆ ಕಾರಣವಾಗಿದೆ. ಸಿದ್ಧರಾಮೇಶ್ವರರ ಇಂತಹ ಅನೇಕ ಸಂದೇಶಗಳನ್ನು ಅವರ ಇನ್ನೂ ಅನೇಕ ವಚನಗಳಲ್ಲಿ ಕಂಡುಕೊಳ್ಳಬಹುದು. ವಾಚಕರಿಗೆ ಅಂತಹ ಸಂದರ್ಭ, ಸುಸಂಧಿ ಒದಗಿಬರಲೆಂದು ಬಸವಾದಿ ಶಿವಶರಣರಲ್ಲಿ ಅನನ್ಯ ಭಕ್ತಿಯಿಂದ ಪ್ರಾರ್ಥಿಸುವೆನು.

### ನಿಸ್ಸೀಮ ಚೆಲುವ

ಹಿಡಿಮುಷ್ಟಿ ಹೃದಯ ಹಿಡಿದಿತ್ತು ವಿಶ್ವ
ನರನಲ್ಲಿ ಮೂಡಿತ್ತು ಅಮರತ್ವ ಭಾಷ್ಯ।
ಹಸಿರ ಉಸಿರಲಿ ಹಬ್ಬಿತೊ ಕಾಶಿ।
ನೀನಿಟ್ಟ ಹೆಜ್ಜೆಯಲಿ ಮೂಡಿತೊ ಕಾಶಿ।
ಸಿದ್ಧ ಬುದ್ಧರ ಜಯಂತಿಯಲೆ ಮೈಮರೆತ ಲೋಕ
ತನ್ನ ನೂಲಿನಲೆ ತಾನೆ ನರಳೂವ ತರಣಿಯಂಥ ನರಕ
ಭವಸನ್ನಿಧಿಯ ಭಕ್ತಿಯಾಗಿರೂಪುಗೊಂಡವ



# ಲಿಂಬೆ ಹಣ್ಣಿನಂಥ ಔಷಧಿ ಇನ್ನೊಂದಿಲ್ಲ

–ಪ. ರಾಮಕೃಷ್ಣಶಾಸ್ತ್ರಿ, ಶಿವಶಕ್ತಿನಿಲಯ, ಮಚ್ಚಿನ–574295, ದ. ಕ.

"ಗಾತ್ರದಲ್ಲಿ ಲಿಂಬೇಹಣ್ಣು; ಪೌರುಷದಲ್ಲಿ ಪರ್ವತ" ಎಂಬ ಗಾದೆಯಿದೆ. ಲಿಂಬೆಹಣ್ಣು ಗಾತ್ರದಲ್ಲಿ ಚಿಕ್ಕದಿರಬಹುದು. ಆದರೆ ಇದರ ಶಕ್ತಿ ಅದ್ಭುತ. ಉಪ್ಪಿನ ಕಾಯಿಯಿಂದಾರಂಭಿಸಿ ನಾನಾ ಔಷಧಿಗಳ ತಯಾರಿಕೆಯವರೆಗೂ ಅದರ ಬಳಕೆ ವೈವಿಧ್ಯಮಯ;

ಲಿಂಬೆಹಣ್ಣಿನಲ್ಲಿ 'ಸಿ' ಜೀವಾತು ಇದೆ; ಅದರ ನಿತ್ಯಬಳಕೆಯಿಂದ ಸ್ಕರ್ವಿ ರೋಗ ದೂರವಾಗುತ್ತದೆ. ದಂತಕ್ಷಯ ಎನಿಸಿದ ಪಯೋರಿಯಾ ರೋಗ ಒಳಗೆ ಬರುವುದಿಲ್ಲ. ಪಿತ್ಥ ಪ್ರಕೋಪವಿದ್ದವರೂ ಲಿಂಬೆಗೆ ಮಣ್ಣು ಹಚ್ಚಿ ಸುಟ್ಟು ಅದನ್ನು ಹಿಂಡಿ ತಲೆಗೆ ಹಚ್ಚುತ್ತಾರೆ. ಲಿಂಬೆಹಣ್ಣಿನ ಪಾನಕ ಶಕ್ತಿದಾಯಕ. ಲಿಂಬೆರಸವನ್ನು ಬೆರೆಸಿ ಹಾಲಿನಿಂದ ತಯಾರಿಸುವ ಪೇಯವೊಂದು ರೋಗದಿಂದ ಚೇತರಿಸಿಕೊಳ್ಳುತ್ತಿರುವವರಿಗೆ ಚೇತನವೀಯುತ್ತದೆ.

ಊಟದಲ್ಲಿ ಲಿಂಬೆಯ ಬಳಕೆಯಿಂದ ರಕ್ತದಲ್ಲಿ ಕೆಂಪುಕಣಗಳು ಹೆಚ್ಚಾಗಿ. ಅನೀಮಿಯಾ ರೋಗ ದೂರವಿರುತ್ತದೆ. ಕ್ಷಯರೋಗ, ನಾಯಿಕೆಮ್ಮು, ನೆಗಡಿ, ಶೀತ, ಜ್ವರ, ವಿಷಕಡಿತಗಳಲ್ಲಿ ಲಿಂಬೆಯನ್ನು ವಿವಿಧ ಬಗೆಯಲ್ಲಿ ಬಳಸುತ್ತಾರೆ. ಗಂಟಲುನೋವು, ಸ್ಕರ್ವಿಗಳಿಗೆ ಲಿಂಬೆ ಸಂಜೀವಿನಿ ಎಂದು ಕ್ಯಾಪ್ಟನ್‌ಕುಕ್ ಸ್ವಾನುಭವದಿಂದ ತೋರಿಸಿಕೊಟ್ಟದ್ದ.

ಕ್ರಿ. ಪೂ. ೪ ಸಾವಿರ ವರ್ಷಗಳ ಹಿಂದೆಯೇ ಲಿಂಬೆಯನ್ನು ಬಳಸಲಾಗುತ್ತಿತ್ತು. ೧೬೦೦ ವರ್ಷಗಳಿಂದೀಚೆಗೆ ಜಗತ್ತಿನ ಎಲ್ಲೆಡೆ ಅದರ ಉಪಯೋಗವಾಗುತ್ತಿದೆ. ಲಿಂಬೆಗಳಲ್ಲಿ ದೊಡ್ಡಗಾತ್ರದ ಗಜಲಿಂಬೆಗಳಿದ್ದರೂ ಅದಕ್ಕಿಂತ ಅಧಿಕ ರಸಗುಣಗಳಿರುವ ಸಣ್ಣ ಲಿಂಬೆಯೇ ಅಧಿಕ ಬಳಕೆಯಾಗುತ್ತಿದೆ. ಲಿಂಬೆಯಲ್ಲಿ ಪ್ಲೇವೋನಾಯಿಡ್ ಎಂಬ ವಿಶೇಷವಾದ ಗುಣ ಅಡಕವಾಗಿದೆ. ಲಿಂಬೆರಸದಲ್ಲಿ ಹಾಕಿಟ್ಟ ಮಾಂಸಾಹಾರವನ್ನು ಬಹುದಿನಗಳ ಕಾಲ ಕೆಡದಂತೆ ಅದು ರಕ್ಷಿಸುತ್ತದೆ.

ರುಚಿಯಲ್ಲಿ ಲಿಂಬೆ ಹುಳಿಯಾದರೂ ದೇಹಕ್ಕೆ ಅಗತ್ಯವಾದ ಶರ್ಕರವು ಅದರಲ್ಲಿದೆ. ಮಕ್ಕಳಿಗೆ ವಿಟಾಮಿನ್ 'ಸಿ' ಯ ಕೊರತೆಯುಂಟಾದಾಗ ಹಲವಾರು ಪೀಡೆಗಳು ಗೋಚರಿಸುತ್ತವೆ. ಅದೆಲ್ಲವನ್ನೂ ನಿವಾರಿಸುವ ಶಕ್ತಿ ಲಿಂಬೆ ಹಣ್ಣಿಗಿದೆ.

ತೈಲಾಂಶಭರಿತವಾದ ಲಿಂಬೆಯ ಸಿಪ್ಪೆಯನ್ನು ಮದ್ಯಾರ್ಕದ ಬಳಕೆಯಿಂದ ರಸ ತೆಗೆದು ಯೂ ಡಿ ಕೊಲೋನ್‌ನಂಥ ಸುಗಂಧ ದ್ರವ್ಯ ತಯಾರಿಸುತ್ತಾರೆ. ಆದಕ್ಕೆ ಆಕರ್ಷಕ ಕಂಪಿರುತ್ತದೆ. ಲಿಂಬೆ ಬೀಜದಲ್ಲಿ ಶೇ. ೨೦ ರಷ್ಟು ತೈಲಾಂಶವಿರುವುದರಿಂದ ವಾರ್ನಿಷು, ಜಲವರ್ಣಗಳು, ಸ್ನಾನದ ಸಾಬೂನುಗಳು ಅದರಿಂದ ಸಿದ್ಧವಾಗುತ್ತವೆ. ಲಿಂಬೆ ಸಿಪ್ಪೆಯಲ್ಲಿ 'ಪಿ' ಜೀವನಸತ್ವ ಉಂಟು.

ಇದು ಪರಮಾಣು ಬಾಂಬಿನ ಯುಗ. ಚೀನ, ಜರ್ಮನ್ ಮೊದಲಾದೆಡೆಗಳಲ್ಲಿ ವಿಶ್ವಯುದ್ಧದ ಸಂದರ್ಭ ಭೀಕರವಾದ ಬಾಂಬುಗಳನ್ನು ಪ್ರಯೋಗಿಸಲಾಗಿತ್ತು. ಅದರಿಂದ ಹರಡಿದ ಅಣುಗಳು ಜಗತ್ತಿನ ಎಲ್ಲೆಡೆ ಏನಾದರೊಂದು ಅನಾಹುತ ಮಾಡುವ ಭಯವಿದ್ದರೂ ಆದನ್ನು ತಡೆಯುವ ಶಕ್ತಿ ಲಿಂಬೆಯ ಸಿಪ್ಪೆಗೆ ಇದೆಯೆಂದು ಅಮೇರಿಕದ ಲ್ಯಾಬೋರೇಟರಿಯೊಂದು ತೋರಿಸಿಕೊಟ್ಟು, ಪರಮಾಣುವಿನ ಅಪಾಯದಿಂದ ಪಾರಾಗಬಲ್ಲ ಔಷಧಿಯನ್ನು ಅದರಿಂದ ತಯಾರಿಸಲು ಶ್ರಮಿಸುತ್ತಿದೆ. ಬಯೋಫ್ಲವಿನ್ ಎಂಬ ಅದ್ಭುತ ಪದಾರ್ಥ ಲಿಂಬೆ ಸಿಪ್ಪೆಯಲ್ಲಿದೆ. ಅದನ್ನು ಕೆಲವು ಬೆಕ್ಕುಗಳಿಗೆ ತಿನ್ನಿಸಿ ಅವುಗಳನ್ನು ಅಣುಬಾಂಬಿನ ವಿಕಿರಣಕ್ಕೆ ಗುರಿಪಡಿಸಲಾಯಿತು. ಔಷಧಿ ತಿಂದ ಬೆಕ್ಕುಗಳು ಬದುಕಿದುವು. ತಿನ್ನಿಸದೆ ಇದ್ದವುಗಳು ನರಳುತ್ತಾ ಸತ್ತುವು.

ಬ್ರಿಟನಿನಲ್ಲಿ ಲಿಂಬೆಯ ಸಿಪ್ಪೆಯಿಂದ ಇನ್ನೊಂದು ವಿಶಿಷ್ಟ ಔಷಧಿ ತಯಾರಿಸುತ್ತಿದ್ದು ಇದು ಕ್ಯಾನ್ಸರ್ ರೋಗವನ್ನು ಸಮೂಲಾಗ್ರ ನಿವಾರಿಸುವ ಆಶೆ ಇದೆ. ಉಕ್ಕಿನ ಕಾರ್ಖಾನೆಗಳಲ್ಲಿ ಉಕ್ಕು ಕರಗಿಸಲು ಬಳಸುವ ದ್ರವ್ಯಕ್ಕೂ ಲಿಂಬೆಯೇ ಮೂಲವಾಗಿದೆ.

'ಪೆಕ್ಟಿನ್' ಎಂಬ ರಾಸಾಯನಿಕ ಪದಾರ್ಥ ಲಿಂಬೆಸಿಪ್ಪೆಯಲ್ಲಿದೆ. ಇದರಿಂದ ಬಣ್ಣಗಳನ್ನು ಕೆಡದಂತೆ ರಕ್ಷಿಸುತ್ತಾರೆ. ಪ್ಲಾಸ್ಟಿಕ್, ಚಾಕೊಲೇಟ್, ಟೂತ್‌ಪೇಸ್ಟ್, ಪೆಪ್ಪರಮೆಂಟುಗಳು, ಪೆನ್ಸಿಲಿನ್‌ನಂಥ ಮುಲಾಮುಗಳು ಕರಗಿ ನೀರಾಗಿ ಹರಿಯದಂತೆ ಅವುಗಳ ಹೊರಭಾಗಕ್ಕೆ ಇದನ್ನು ಲೇಪಿಸುತ್ತಾರೆ. ಸಿಪ್ಪೆಯಲ್ಲಿರುವ ಸಿಟ್ರಿನ್‌ನಿಂದ ದಂತಕ್ಷಯ, ರಕ್ತಸ್ರಾವಗಳನ್ನು ದೂರವಿಡಲು ಅದು ಸಹಾಯಕ.

ಪೆಕ್ಟಿನ್‌ನಲ್ಲಿರುವ ಇನ್ನೊಂದು ವಿಶೇಷ ಗುಣವೆಂದರೆ ವ್ರಣಗಳು ಉಲ್ಬಣಿಸಿ, ಕೀವು ಆಗಿದ್ದರೂ ಅದು ಗುಣಪಡಿಸುತ್ತದೆ. ಕೆಲವೊಮ್ಮೆ ಲೂತಿಯಂಥ ಚರ್ಮವ್ಯಾಧಿಗಳಿಗೂ ಅದೊಂದು ಸಿದ್ಧೌಷಧ. ರಕ್ತಾತಿಸಾರ ನಿವಾರಣೆಗೆ ಪೆಕ್ಟಿನ್ ಒಂದು ಟಾನಿಕ್‌ನಂತೆ. ಕರುಳಿನಲ್ಲಿ ಕೀವು ಆಗಿದ್ದರೆ ಪೆಕ್ಟಿನ್ ಅದನ್ನು ಗುಣಪಡಿಸುವುದು.



ಬಯೋಫ್ಲವಿನ್ ಎಂಬ ಲಿಂಬೆಯ ಶಾಖ ಕಿರಣಗಳಿಂದ ಸೂಕ್ಷ್ಮ ಕ್ರಿಮಿಗಳನ್ನು ನಿವಾರಿಸಬಹುದು. ಲಿಂಬೇರಸಕ್ಕೆ ಸಕ್ಕರೆ ಮತ್ತು ಉಪ್ಪು ಬೆರೆಸಿ ಸೇವಿಸಿದರೆ ಅತಿ ಬಾಯಾರಿಕೆ, ಗಂಟಲು ಕೆರೆತಗಳು ಗುಣವಾಗುವವು. ಲಿಂಬೆ ಹಣ್ಣಿನ ಚರಟದಿಂದ ತಾಮ್ರದ ಪಾತ್ರೆಗಳನ್ನು ತಿಕ್ಕಿ ತೊಳೆದರೆ ಲಕಲಕ ಹೊಳೆಯುತ್ತದೆ. ಲಿಂಬೆ ರಸ ಸೇವನೆಯಿಂದ ವಿಪರೀತ ವಾಂತಿಯೂ ನಿಲ್ಲುವುದು.

ವಿಷವಸ್ತು ಸೇವಿಸಲ್ಪಟ್ಟಾಗ ಲಿಂಬೆಹಣ್ಣಿನ ಮೂಲಕ ವಿಷ ತೆಗೆಯುತ್ತಾರೆ. ಕ್ಲಿಯೋಪಾತ್ರ ದಿನವೂ ಮೈ ಕೈಗಳಿಗೆ ಲಿಂಬೆರಸವನ್ನು ಲೇಪಿಸುತ್ತಿದ್ದುದರಿಂದ ಅವಳ ಶರೀರ ಹತ್ತಿಯಂತೆ ಮೃದುವಾಗಿದ್ದುದರಿಂದ ಈಗಲೂ ಶೃಂಗಾರ ಪ್ರಸಾಧನಗಳಲ್ಲಿ ಲಿಂಬೆಯಿಂದ ಅಧಿಕ ಲಾಭವಿದೆ. ಹುಚ್ಚುನಾಯಿ ಕಡಿದಾಗ ಅದರ ವೈರಸ್‌ಗಳನ್ನು ಕೊಲ್ಲುವ ಶಕ್ತಿ ಲಿಂಬೆಗೆ ಇದೆಯೆನ್ನುವುದು ಸಾಬೀತಾಗಿದೆ ಲಿಂಬೆರಸದಲ್ಲಿ ಶಂಖವನ್ನು ತೇದು ಲೇಪಿಸಿದರೆ ಮೊಡವೆಗಳು ಗುಣವಾಗುತ್ತವೆ. ದೇಹದ ಖನಿಜಸತ್ವವನ್ನು ರಕ್ಷಿಸುವ ಶಕ್ತಿಯುಳ್ಳ ಲಿಂಬೆಯು ಔಷಧ ಪ್ರಪಂಚದಲ್ಲೂ ಒಂದು ವಿಕ್ರಮಸ್ಥಾಪಿಸಿದೆ.

## ಸಹನೆ

ಎಂ. ಕೆ. ಭಾಶಿಂಗಿ, ಭೂ.ಸಾ.ಸಂ. ಕಾರ್ಯಾಲಯ,
ಕೃಷಿ ಇಲಾಖೆ–ಅಥಣಿ.

ಸಹನೆಯೆಂಬುದು ವಿಜಯದ ಹೆಗ್ಗುರುತು ಕಾಣಾ
ಬಹು ಜನಗಳಲ್ಲಿದು ಅತಿವಿರಳ ಕೂಡಾ
ಕಹಿ ಕಹಿಯು ಕಷಾಯ ನೀಡಿ ಕೊನೆಗೆ
ಸಿಹಿ ಸಂತೋಷದ ರಸಪಾಕ ದೇವಾ.

ಮರೆಯದಿರು ಮಹಾತ್ಮರನು ಲೋಕದೊಳ್
ತೆರೆದು ನೋಡುವರೆ ದಿವ್ಯ ಚರಿತೆಯನು
ಬರಿ ಆಡಂಬರವಲ್ಲವರ ಬಾಳು ಸಹನೆಯು
ಕುರುಹು ನೋಡು ದೇವಾ.

ಗಂಭೀರವಾಗಿಹನು ಗಜದಂತೆ ಸಹನಿಗನು
ತುಂಬು ಫಲಗಳ ಹೊಂದಿದ ಅಚಲ ವೃಕ್ಷ
ರೆಂಬೆಗಳ ಮುರಿದು ಕಲ್ಲುಗಳ ಹೊಡೆದರೂ
ಅಂದಾದ ನೆರಳುಕೊಟ್ಟ ಮರದಂತೆ ದೇವಾ.

# ಸ್ವರದಿಂದ ಅಪರಾಧಿಯ ಬಂಧನ

–ಬಿ. ಸುಬ್ರಾಯಅಡಿಗರು ನಿವೃತ್ತ ಶಿಕ್ಷಕರು ಸೊಂಡೂರು, ಬಳ್ಳಾರಿ ಜಿಲ್ಲೆ.

ಅಪರಾಧಿ ಅದೆಷ್ಟೇ ಜಾಣನಿರಲಿ – ವಿಜ್ಞಾನ ಅವನಿಗಿಂತ ಎರಡು ಹೆಜ್ಜೆ ಮುಂದಿರುತ್ತದೆ. ಬೆರಳು ಗುರುತುಗಳಿಂದ ಅಪರಾಧಿಗಳನ್ನು ಪತ್ತೆಹಚ್ಚುವ ವಿಧಾನವನ್ನು ನಾವೆಲ್ಲ ಬಲ್ಲೆವು. ಪ್ರತಿಯೊಬ್ಬನ ಬೆರಳ ಗುರುತು ತನ್ನದೆ! ವೈಶಿಷ್ಟ್ಯದಿಂದ ಕೂಡಿರುತ್ತದೆಯೆಂಬುದು ಇದರ ಒಂದು ಸಿದ್ಧಾಂತ. ಪ್ರಪಂಚದಲ್ಲಿ ಒಬ್ಬನ ಬೆರಳುಗುರುತುಗಳು ಪೂರ್ತಿಯಾಗಿ ಇನ್ನೊಬ್ಬನ ಬೆರಳು ಗುರುತುಗಳನ್ನು ಹೋಲಲಾರವು. ಪ್ರಯತ್ನಪಟ್ಟರೂ ಇವನ್ನು ಬದಲಾಯಿಸಲು ಸಾಧ್ಯವಿಲ್ಲ.

ಇದೇ ರೀತಿ ಇನ್ನೊಂದು ಶೋಧವನ್ನು ಮಾಡಲಾಗಿದೆ. ಅಮೇರಿಕೆಯ ವಿಶ್ವವಿಖ್ಯಾತ 'ಬೆಲ್ ಟೆಲಿಫೋನ್‌ಲೆಬೋರೆಟರೀಸ್' ದ ವಿಜ್ಞಾನಿಗಳು ಬೆರಳು ಗುರುತುಗಳಂತೆಯೇ ಪ್ರತಿಯೊಬ್ಬನ ಸ್ವರವೂ ಇತರರಿಗಿಂತ ಬೇರೆಯಾದುದೆಂದು ಕಂಡು-ಹಿಡಿದಿದ್ದಾರೆ.

ಸ್ಥೂಲವಾಗಿ ನಾವೆಲ್ಲ ಇದನ್ನು ಬಲ್ಲೆವು. ಆದರೆ ಇದನ್ನೇ ಸೂಕ್ಷ್ಮವಾಗಿ ವಿಶ್ಲೇಷಿಸಿದ ವಿಜ್ಞಾನಿಗಳು ಇದರ ನೆರವಿನಿಂದ ಈಗ ಸುಲಭವಾಗಿ ಅಪರಾಧಿಯನ್ನು ಹಿಡಿಯಲು ಸಮರ್ಥರಾಗಿದ್ದಾರೆ. ಅಮೇರಿಕೆ ಹಾಗೂ ಕೆನಡಾದ ಹಲವಾರು ನ್ಯಾಯಾಲಯಗಳು ಈ ವಿಧಾನಕ್ಕೆ ಮಾನ್ಯತೆ ನೀಡಿವೆ.

ಸ್ವರದಿಂದ ಮನುಷ್ಯನನ್ನು ಅದೆಂತು ಗುರುತಿಸಬಹುದು ?–ಎಂಬುದನ್ನರಿಯಲು ನಾವು ಸ್ವರದ ವಿಷಯದಲ್ಲಿ ಒಂದಿಷ್ಟು ಮಾಹಿತಿ ಪಡೆಯಬೇಕು.

ನಿಮ್ಮ ಮೆದುಳು ನಿಮಗರಿಯದಂತೆಯೇ ಈ ಕಾರ್ಯ ಮಾಡುತ್ತದೆ. ಫೋನಿನಲ್ಲಿ ಪರಿಚಿತರು ಮಾತಾಡುವಾಗ ಯಾರು ಮಾತಾಡುತ್ತಿದ್ದಾರೆಂದು ನೀವು ತಕ್ಷಣ ಅರಿತುಕೊಳ್ಳುವಿರಿ. ಎರಡುಶಬ್ದ ಕೇಳುತ್ತಲೇ ನಿಮ್ಮ ಸ್ಮೃತಿಕೋಶದಲ್ಲಿ ತುಂಬಿರುವ ರೆಕಾರ್ಡ್ ನಿಮಗೆ ಈ ಬಗ್ಗೆ ಸೂಚನೆ ನೀಡುತ್ತದೆ. ನೀವು ಇದನೆಂತು ಕಂಡುಹಿಡಿದಿರಿ-ಎಂದು ಯಾರಾದರೂ ನಿಮ್ಮನ್ನು ಪ್ರಶ್ನಿಸಿದರೆ ನೀವು ಉತ್ತರಿಸಲಾರಿರಿ. ವಿಜ್ಞಾನಿಗಳೀಗ ಇದಕ್ಕೆ ವೈಜ್ಞಾನಿಕವಾಗಿ ಉತ್ತರ ನೀಡಿದ್ದಾರೆ. ಇದುವರೆಗೆ ನಿಮ್ಮ ಮೆದುಳು ಮಾಡುತ್ತಿದ್ದ ಕಾರ್ಯವನ್ನು ಇನ್ನುಮುಂದೆ ಯಂತ್ರಗಳು ಮಾಡತೊಡಗುವುವು.

ಯಂತ್ರಗಳಿಂದ ಇನ್ನೊಂದು ಲಾಭವಿದೆ. ಅವೆಂದೂ ಸುಳ್ಳುಹೇಳುವುದಿಲ್ಲ. ನಿಮ್ಮ ಮೆದುಳು ಮರೆಯಬಹುದು. ಅಥವಾ ನೀವು ಗುರುತಿಸಿಯೂ ಗುರುತಿಸದಂತೆ ನಟಿಸಬಹುದು. ಯಂತ್ರಗಳು ಈರೀತಿ ಮಾಡಲಾರವು, ಎಂತಲೇ ಅವನ್ನು ಅಪರಾಧಿಗಳ ಪತ್ತೆಗೆ ಬಳಸಲಾಗುತ್ತಿದೆ.



ದೈನಂದಿನ ಕೆಲಸಗಳಿಗಾಗಿ ನಾವು ಧ್ವನಿಗಳನ್ನು ಕೆಲವು ದೊಡ್ಡ ದೊಡ್ಡ ಸಮೂಹಗಳಲ್ಲಿ ವರ್ಗೀಕರಿಸಿಟ್ಟದ್ದೇವೆ. ಉದಾಹರಣೆಗಾಗಿ, ಒಬ್ಬನಸ್ವರ ಅತ್ತಂತೆಯೋ ಗೋಗರದಂತೆಯೋ ಇರಬಹುದು. ಒಬ್ಬನದು ಕೀರಲು ದನಿಯಾದರೆ ಇನ್ನೊಬ್ಬನದು ದಪ್ಪದ ದನಿ. ಮತ್ತೊಬ್ಬನದು ಕರ್ಕಶಸ್ವರ, ಲತಾಮಂಗೇಶ್ವರಳ ದನಿ ತುಂಬ ತೆಳುವಾದುದೆಂದು ನೀವು ಖಂಡಿತವಾಗಿ ಹೇಳಬಲ್ಲಿರಿ. ಕುಂದನಲಾಲ್ ಸೈಗಲ್‌ರ ಸ್ವರ ನೋವಿನಿಂದ ತುಂಬಿ ಮಧುರವಾಗಿದ್ದರೂ ದಪ್ಪವಾದುದು. ದಪ್ಪಸ್ವರಗಳೂ ಹಲವು ಬಗೆಯವು. ಎಷ್ಟೋಸಲ ಕಿವಿಗಳು ಅವುಗಳ ಅಂತರವ ಅರಿಯದೆ ಹೋಗಬಹುದು. ಅವುಗಳ ವರ್ಗೀಕರಣಕ್ಕೆ ಬೇಕಾದ ಶಬ್ದಗಳು ಶಬ್ದಕೋಶದಲ್ಲಿ ದೊರೆಯದೇ ಹೋಗಬಹುದು. ಪಂಕಜ ಮಲ್ಲಿಕ್, ಸೀ.ಎಚ್. ಆತ್ಮಾ, ಕೃಷ್ಣ ಚಂದ್ ದೇ, ಮುಖೇಶ–ಮೊದಲಾದವರ ಹಾಡುಗಳನ್ನು ಕೇಳುವಾಗ ಸೈಗಲ್‌ರ ಹಾಡಿನ ಭ್ರಮೆ ಉಂಟಾಗುತ್ತದೆ. ಇಂಥ ವೇಳೆಯಲ್ಲಿ ವಿಜ್ಞಾನ ನಮ್ಮ ನೆರವಿಗೆ ಮುಂದಾಗುತ್ತದೆ. ಶಬ್ದಗಳಿಂದ ಹೇಳಲಾಗದುದನ್ನೇ ಅದು 'ಅಂಕೆ'ಗಳಿಂದ ಹೇಳುತ್ತದೆ.

ನೀವು ಧ್ವನಿಯ ಆವೃತ್ತಿಯ ಬಗ್ಗೆ ಕೇಳಿರಬಹುದು. ಗಾಳಿಯಲ್ಲಿ ಹುಟ್ಟಿದ ಒಂದು ಸೆಕೆಂಡಿನ ಕಂಪನಗಳ ಸಂಖ್ಯೆ ಅದಾಗಿರುತ್ತದೆ. ತೆಳುಸ್ವರದ ಆವೃತ್ತಿ ಹೆಚ್ಚಾಗಿರುತ್ತದೆ. ದಪ್ಪಸ್ವರದ ಆವೃತ್ತಿ ಕಡಿಮೆ, ಸಾಮಾನ್ಯವಾಗಿ ಹೆಂಗಸರ ಸ್ವರದ ಆವೃತ್ತಿ ಗಂಡಸರ ಆವೃತ್ತಿಗಿಂತ ಹೆಚ್ಚಿರುತ್ತದೆ. ಆದರೆ ನಮ್ಮ ಗಂಟಲು ಒಂದೇ ಆವೃತ್ತಿಯನ್ನು ಹೊರಡಿಸದೆ ಹಲವಾರು ಆವೃತ್ತಿಗಳನ್ನು ಹೊರಡಿಸಬಲ್ಲುದು. ಇಷ್ಟಾದರೂ ಪ್ರತಿಯೊಬ್ಬನ ಆವೃತ್ತಿ ಬೇರೆ ಬೇರೆ ಪ್ರತಿಯೊಬ್ಬನ ಗಂಟಲೂ ಬೇರೆ ಬೇರೆ ಆವೃತ್ತಿಗಳನ್ನು ಬೇರೆ ಬೇರೆ ಆವೃತ್ತಿಗಳಿಂದ ಹೊರಡಿಸುವುದೇ ಇದಕ್ಕೆ ಕಾರಣ.

ಅಮೇರಿಕೆಯ ನ್ಯೂಜರ್ಸಿಯ ವಿಜ್ಞಾನಿ ಡಾ|| ಲಾರೆನ್ಸ್ ಕಸ್ಟಾರ್‌ರ ಸಹಾಯಕರಾದ ಶರೀರ ವಿಜ್ಞಾನಿಗಳು ಸಾವಿರಾರು ಪ್ರಯೋಗ ನಡೆಸಿ, ಪ್ರತಿಯೊಬ್ಬನ ಸ್ವರೋತ್ಪಾದಕ ಅವಯವಗಳು ಇತರರಿಗಿಂತ ಭಿನ್ನವಾಗಿವೆಯೆಂಬುದನ್ನು ರುಜುವಾತುಪಡಿಸಿದ್ದಾರೆ. ಇಬ್ಬರು ಮನುಷ್ಯರ ಸ್ವರೋತ್ಪಾದಕ ಅವಯವಗಳು ಒಂದೇ ರೀತಿ ಇರಲು ಸಾಧ್ಯವೇ ಇಲ್ಲ. ಹೀಗಾಗಿ ಅವುಗಳಿಂದ ಹೊರಡುವ ಸ್ವರಗಳೂ ಬೇರೆ ಬೇರೆ.

ಈಗ ಧ್ವನಿಗಳ ಆವೃತ್ತಿಗಳ ತೀವ್ರತೆಯನ್ನಾಧರಿಸಿ ಅವನ್ನು ವರ್ಗೀಕರಿಸುವುದಷ್ಟೇ ಯಂತ್ರದ ಕೆಲಸ, ಈ ಯಂತ್ರಕ್ಕೆ 'ಸೌಂಡ್ ಸ್ಪೆಕ್ಟ್ರೋಗ್ರಾಮ್ ಎನ್ನುತ್ತಾರೆ. ಈ ಯಂತ್ರ ಆವೃತ್ತಿಗಳ ಹಾಗೂ ಅವುಗಳ ತೀವ್ರತೆಗಳ ಗ್ರಾಫ್ ಎಳೆಯುತ್ತದೆ. ಇದು ಆ ವ್ಯಕ್ತಿಯ ವಾಯ್ಸ್ ಪ್ರಿಂಟ್" ಅರ್ಥಾತ್ ತಾಂತ್ರಿಕ ಭಾಷೆಯಲ್ಲಿ ಸೌಂಡ್ ಸ್ಪೆಕ್ಟ್ರೋಗ್ರಾಮ್ ಎನಿಸುತ್ತದೆ.

ಈ ತಂತ್ರ ಅಪರಾಧಿಗಳ ಬಂಧನಕ್ಕೆ ಅದೆಂತು ನೆರವಾಗುವುದೆಂದು ನೋಡೋಣ, ಅಪರಾಧಿಯ ಧ್ವನಿಯನ್ನು ಟೇಪ್ ಮಾಡುವ ಸಂಗತಿ ಅಪರಾಧಿ ಕಥೆಗಳನ್ನೋದುವ ಓದುಗರು ಚೆನ್ನಾಗಿ ಬಲ್ಲರು. ಅಪಹರಣ ಒತ್ತೆಹಣ ಮೊದಲಾದ ಸಂದರ್ಭಗಳಲ್ಲಿ ಫೋನಿನಲ್ಲಿ ಬೆದರಿಕೆ ಹಾಕುತ್ತಾರೆ. ಬ್ಲಾಕ್‌ಮೇಲ್ ಮಾಡುವಾಗಲೂ ಫೋನಿನಲ್ಲೇ ಮಾತುಕತೆ ನಡೆಯುತ್ತದೆ. ಅಂಥ ಸಂದರ್ಭದಲ್ಲಿ ಮಾತುಕತೆಯನ್ನು ಟೇಪ್ ಮಾಡಬಹುದು.

ಈ ಟೇಪ್ ಮಾಡಿದ ಮಾತುಕತೆಯನ್ನು ಯಂತ್ರ ವಾಯ್ಸ್ ಪ್ರಿಂಟ್ ಮೂಲಕ ಸುರಕ್ಷಿತವಾಗಿಡುತ್ತಿದೆ. ಆಗ ನಾವು ಸಂದಿಗ್ಧ ವ್ಯಕ್ತಿಗಳ ವಾಯ್ಸ್‌ಪ್ರಿಂಟ್ ತಯಾರಿಸಿ ಅವಕ್ಕೆ ಹೋಲಿಸಿ ನೋಡಬಹುದು. ಹಳೆಯ ಅಪರಾಧಿಗಳಾಗಿದ್ದರೆ ಅವರ ವಾಯ್ಸ್ ಪ್ರಿಂಟ್ ಪೊಲೀಸ್ ಇಲಾಖೆಯಲ್ಲಿ ಸುರಕ್ಷಿತವಾಗಿರುತ್ತದೆ. ಆಗ ಅಂತಹವರನ್ನು ಸುಲಭವಾಗಿ ಪತ್ತೆ ಹಚ್ಚಬಹುದು. ಈ ಕೆಲಸವನ್ನು ಒಂದು ಪುಟ್ಟ ಕಂಪ್ಯೂಟರ್ ನೆರವೇರಿಸಬಲ್ಲುದು.

ನಮ್ಮಲ್ಲಿ ಪೊಲೀಸ್ ವಿಭಾಗ ಬೆರಳು ಗುರುತುಗಳ ರಿಕಾರ್ಡ್ ಇಡುವಂತೆಯೇ ವಿದೇಶಗಳಲ್ಲಿ ಅಪರಾಧಿಗಳ ವಾಯ್ಸ್ ಪ್ರಿಂಟ್ ಇಡಲಾಗುತ್ತದೆ. ಬ್ಯಾಂಕ್ ದರೋಡೆಗಳಲ್ಲಿ ಹೆಚ್ಚಾಗಿ ಅಪರಾಧಿಗಳು ಕೈಗಳಿಗೆ ಕೈಚೀಲ ತೊಟ್ಟಿರುವುದರಿಂದ ಬೆರಳು ಗುರುತು ಸಿಗುವುದಿಲ್ಲ. ಬ್ಯಾಂಕಿನ ಗುಪ್ತ ಕ್ಯಾಮರಾದಲ್ಲಿ 'ವಿಡಿಯೋ ರಿಕಾರ್ಡಿಂಗ್ ವ್ಯವಸ್ಥೆಯಿದ್ದರೆ, ದರೋಡೆಗಾರರ ಧ್ವನಿ ರಿಕಾರ್ಡ್ ಆಗುವುದು. ಆದುದರಿಂದ ಅಪರಾಧಿಗಳನ್ನು ಹಿಡಿಯಲು ಅನುಕೂಲವಾಗುವುದು.

ಧ್ವನಿ ಬದಲಾಯಿಸಿ ಮಾತನಾಡಲು ನಾವೆಷ್ಟೇ ಪ್ರಯತ್ನಿಸಿದರೂ, ಅದರ ಮೂಲಭೂತ ವೈಶಿಷ್ಟ್ಯ ಬದಲಾಗುವುದಿಲ್ಲ. ಯಂತ್ರ ಕೂಡಲೇ ಅದನ್ನು ಹಿಡಿದು ಬಿಡುವುದು. ಅಪರಾಧಮಾಡಿ ಸ್ವರೋತ್ಪಾದಕ ಅವಯವಗಳನ್ನು ಆಪರೇಶನ್‌ಗೆ ಗುರಿಪಡಿಸಿದರೆ ಮಾತ್ರ ಇದು ಸಾಧ್ಯ. ಬೆರಳು ಗುರುತು ಕಂಡುಹಿಡಿಯುವರೆಂದು ಬೆರಳನ್ನೇ ಕತ್ತರಿಸಿಕೊಳ್ಳುತ್ತಾರೆಯೆ? ಅದೇ ರೀತಿ ಇದು ಕೂಡ ಸಂಭವನೀಯವಲ್ಲ.

ಅಪರಾಧಿಗಳ ಬಂಧನದಲ್ಲಿ 'ವಾಯ್ಸ್ ಪ್ರಿಂಟ್' ಉಪಯೋಗ ವ್ಯಾಪಕವಾದುದು. ಫೋನಿನಲ್ಲಿ ಬರುವ ಧ್ವನಿಯನ್ನು ಟೇಪ್‌ಮಾಡುವ ಏರ್ಪಾಡು ಮಾಡಿಟ್ಟುಕೊಂಡವರು ಸುಲಭವಾಗಿ ಪೊಲೀಸರಿಗೆ ನೆರವಾಗಬಲ್ಲರು.

ಕೆಲವೊಮ್ಮೆ ಪುಂಡ ಹುಡುಗರು ಸಭ್ಯ ಹುಡುಗಿಯರನ್ನು ಫೋನಿನಲ್ಲಿ ಚುಡಾಯಿಸುತ್ತಾರೆ. ಲಂಚದ ಹಣವನ್ನು ಕೆಲವರು ಫೋನಿನಲ್ಲೇ ತೀರ್ಮಾನಿಸುತ್ತಾರೆ. ಇಂಥ ವ್ಯವಸ್ಥೆ ಭಾರತದಲ್ಲಿ ಬಂದರೆ ಈ ಎಲ್ಲ ಉಪಟಳಗಳೂ ಕಡಿಮೆಯಾದಾವು.



ವಾಯ್ಸ್ ಪ್ರಿಂಟ್ ಬಳಕೆ ಅಪರಾಧಶೋಧಕ್ಕಷ್ಟೇ ಸೀಮಿತವಾದುದಲ್ಲ ಕೆಲವರ್ಷಗಳ ಹಿಂದೆ ಮನೋರಂಜಕ ಪ್ರಯೋಗವೊಂದು ನಡೆಯಿತು. ರಷ್ಯದ ಮಾಜಿಮುಖಂಡ ನಿಕಿತಾಬ್ರುಶ್ಚೇವ ಪದಚ್ಯುತರಾದಾಗ, ತುಂಬ ಕ್ಷುಬ್ಧ ಸ್ಥಿತಿಯಲ್ಲಿದ್ದರು. ನಿರಾಶೆಯ ಆ ದಿನಗಳಲ್ಲೇ ಅವರು ತಮ್ಮ ಸಂಸ್ಮರಣೆಗಳನ್ನು ಟೇಪ್ ಮಾಡಿದರು ೧೮೦ ತಾಸುಗಳ ಈ ಟೇಪ್‌ಗಳು ಗುಟ್ಟಾಗಿ ಪಾಶ್ಚಾತ್ಯ ದೇಶಕ್ಕೆ ಹೋದವು. ಸ್ಟಾಲಿನ್ ಬಲು ಕ್ರೂರ ಹಾಗೂ ತಲೆಹಿಡುಕ ನಿರಂಕುಶಾಧಿಕಾರಿಯೆಂದು ಬ್ರುಶ್ಚೇವ್ ವರ್ಣಿಸಿದ್ದರು. ಸ್ಟಾಲಿನ್‌ಯುಗದ ಅತ್ಯಾಚಾರಗಳನ್ನು ಆ ಸಂಸ್ಮರಣೆಯಲ್ಲಿ ಬಯಲುಗೊಳಿಸಲಾಗಿತ್ತು.

ಮುಂದೆ ಈ ಸಂಸ್ಮರಣೆ ಒಂದು ಅಮೇರಿಕನ್ ಪತ್ರಿಕೆಯಲ್ಲಿ ಧಾರಾವಾಹಿ ಪ್ರಕಟವಾದಾಗ ಜನ ನಂಬಲಿಲ್ಲ. ಆಗ ಸಂಯುಕ್ತರಾಷ್ಟ್ರ ಸಂಘದಲ್ಲಿ ಸುರಕ್ಷಿತವಾಗಿದ್ದ ಭಾಷಣಗಳ ವಾಯ್ಸ್ ಪ್ರಿಂಟ್‌ಗೂ ಈ ಟೇಪ್‌ದ ವಾಯ್ಸ್ ಪ್ರಿಂಟ್‌ಗೂ ಹೋಲಿಸಿ ನೋಡಿದಾಗ ಸಂಸ್ಮರಣ ಖೋಟಾದಲ್ಲೂ ಅಲ್ಲವೆಂದು ತಿಳಿದು ಬಂತು. ಭಾರತದಲ್ಲೂ ಇಂಥ ಸೌಲಭ್ಯ ಆರಂಭವಾದರೆ ಅಪರಾಧಿಗಳಿಗೆ ಇನ್ನಷ್ಟು ತೊಂದರೆಯಾಗುವುದರಲ್ಲಿ ಸಂದೇಹವಿಲ್ಲ.

(ಹಿಂದಿಯಿಂದ)

# ಗುರುವೇ ಮುಕ್ತಿಗೆ ಮೂಲಾಧಾರ

ಶ್ರೀ ನಾಗೇಶ್ ನಿಲುಗಲ್, ಕಂದಗಲ್ ಹುನಗುಂದಗಿ ತಾ॥ ಬಿಜಾಪುರ-ಜಿಲ್ಲೆ.

ಗುರು ಮಾನವನ ಮುಕ್ತಿಗೆ ಮೂಲಾಧಾರನಾಗಿದ್ದಾನೆ. ಅವನು ಜಗದಾದಿ-ಯಿಂದಲೂ ದೊಡ್ಡವನೆನಿಸಿ ಪರಮೋಚ್ಚವಾದ ಗೌರವಕ್ಕೆ ಪಾತ್ರನಾಗಿದ್ದಾನೆ. ಜೀವನ ಜಂಜಾಟಕ್ಕೆ ತೊಳಲಿ ಬಳಲುತ್ತಿರುವ ಜೀವಿಗೆ ಆತ್ಮವಿಶ್ವಾಸ ಹುಟ್ಟಿಸಿ ಆತನ ಮನಕ್ಕೆ ವಿಶಾಲವಾದ ಪರಾತ್ಪರ ಶಕ್ತಿಗೆ ಎದುರಾಗಿ ನಿಂತು ಧೀರತ್ವವನ್ನು ಬಿಂಬಿಸುತ್ತಾ ಬಾಳಿನ ಮಹತಿಯನ್ನು ಮನಗಣಿಸಿ ಕೊಡುವವ ಗುರುವಾಗಿದ್ದಾನೆ. ಶ್ರೀ ಜಗದ್ಗುರು ರೇಣುಕಾಚಾರ್ಯರು ಹೇಳಿದಂತೆ ಗುರುಭಕ್ತಿ ಇಲ್ಲದವರಿಗೆ ಶಿವಭಕ್ತಿ ಬಾರದು" ಅಂದರೆ ಶರಣರು ಗುರುವಿನ ಕುರಿತು "ಶಿವಪಥವನರಿವಡೆ ಗುರುಪಥವೇ ಮೊದಲು" ಎಂದಿದ್ದಾರೆ. ಮಕ್ಕಳಿಗೆ ತಾಯಿ ವಿದ್ಯಾರ್ಥಿಗಳಿಗೆ ಶಿಕ್ಷಕ ಬೇಕಾಗುವಂತೆ ಆಧ್ಯಾತ್ಮ ಜಿಜ್ಞಾಸು ಶಿವಭಕ್ತರಿಗೆ ಗುರುಬೇಕೆ ಬೇಕು. ಮಾನವ ಪ್ರಾಣಿಯು ಹುಟ್ಟು ಸಾವುಗಳಿಗೆ ಒಳಗಾಗಿ ಹಾಗೂದು ದುಃಖಮಯವಾದ ಉಪಸಂಸಾರ ಚಕ್ರಕ್ಕೆ ಸಿಲುಕಿ ತೊಳಲಾಡುತ್ತಿರುವಾಗ ಮಾನವನ ಈ ಸಮಸ್ಯೆಗೆ ಗುರುದೇವನು ಏಕಮೇವ ಪರಿಹಾರಕನಾಗಿದ್ದಾನೆ ಸುಜ್ಞಾನವುಳ್ಳ ಗುರು ಶಿವನನ್ನೊಲಿಸುವ ಸುಮಾರ್ಗ ತೋರಿಸಿ ಸಂಸಾರವೆಂಬ ಸಮುದ್ರ ದಾಟಿಸುವನು. ಗುರುವಿನ ಸದ್ಬೋಧ ಶಿಷ್ಯನಿಗೆ ಸಂಜೀವಿನಿಯಾಗಿ ಇರುವು ಅರಿವಾಗಿ ಅಮರತ್ವದ ಅನಂತ ಹಿರಿಮೆಗೆ ಪಾತ್ರನಾಗುವನು.

ನಾವು ಎಲ್ಲಿಗೆ ಹೋಗಬೇಕಾದರೂ ನಮಗೆ ದಾರಿತೋರಿಸುವವರೊಬ್ಬರು ಬೇಕೆ ಬೇಕು. ಅರಣ್ಯದಲ್ಲಿ ಅನೇಕ ಕಾಲುದಾರಿಗಳಿದ್ದು ಯಾವ ದಾರಿಎಲ್ಲಿಗೆ ಹೋಗುತ್ತದೆಂಬುದನ್ನು ತಿಳಿಸಲು ಒಬ್ಬರು ಮಾರ್ಗದರ್ಶನ ಪಥಿಕರು ಬೇಕಾಗುವಂತೆ ಗುರುವು ಅತ್ಯವಶ್ಯಕ. "ಮನೆಗೊಬ್ಬ ಹಿರಿಯ, ನಾಡಿಗೊಬ್ಬದೊರೆ, ಗುಡಿ ಗೊಬ್ಬ ದೇವರು" ಎಂಬಂತೆ ಮಾನವ ಜೀವಿತದ ಸಾಫಲ್ಯ ಕೊಟ್ಟ ಗುರುವು ಅತ್ಯವಶ್ಯಕವಾಗಿ ಬೇಕೆ ಬೇಕು ಮಾನವನ ಜೀವಿತದ ಕೀರ್ತಿ ಕಲಶವನ್ನಿಡುವವನು ಗುರು. ಗುರುವಿಲ್ಲದ ವಿದ್ಯೆ ತಂತಿಯಿಲ್ಲದ ವಾದ್ಯದಂತೆ ಎಂದು ಹೇಳುವರು.

ಪರಶಿವನು ನಿರಾಕಾರ ಅಂಥ ಪರಶಿವನಲ್ಲಿ ಬೆರೆಯುವ ಕಲೆಯನ್ನು ತೋರಿಸುವ ಗುರು ಸಾಕಾರ ಶಿವನು. ಕಾರಣ್ಯೆ ಶಿವನ ಕೃಪೆಗಿಂತಲೂ ಹೆಚ್ಚಿನದು. ಹರನಿಗಿಂತಲೂ ಗುರು ಶ್ರೇಷ್ಠನು. ಹರಮುನಿದರೂ ಗುರುವು ಮುನಿಯದೇ ಸಹನೆಯಿಂದ ಕಾಯುತ್ತಾನೆ. ಹರಮುನಿದರೆ ತಾಳಬಹುದು. ಗುರು ಮುನಿದರೆ ಧರೆಗೆ ಧರೆ ಉರಿಯುವುದು ಎಂದು ಶಾಸ್ತ್ರಗಳು ಹೇಳುತ್ತವೆ, ಅಂತೆಯೇ ಗುರುವು ಭವ ಬಂಧನದ ನಿವಾರಣೆಗೆ ಹಾದಿ. ಮೋಕ್ಷಕ್ಕೆ ಮಾರ್ಗದರ್ಶಿಯಾಗಿದ್ದಾನೆ.

ವೇದಶಾಸ್ತ್ರಗಳು ಮನಕ್ಕೆ ತಿಳುವಳಿಕೆ ಕೊಡಬಹುದು. ಪುಸ್ತಕ ಓದಿ ಜ್ಞಾನ ಸಂಪಾದಿಸಬಹುದು. ಆದರೆ ಭಕ್ತಿಯನ್ನು ಯಾವ ವೇದಶಾಸ್ತ್ರಗಳೂ ಪುಸ್ತಕಗಳೂ ಕೊಡಲಾರವು. "ನೂರುನೋದಿ ನೂರ ಕೇಳಿದರೇನು ಆಶೆ ಹರಿಯದು ರೋಷಬಿಡದು" ಎಂದು ಶರಣರ ವಾಣಿಯಂತೆ ಮನಸ್ಸಿನ ವಿಕಾರಗಳೆಲ್ಲಾ ಅಳಿದು ಮನುಷ್ಯನ ಹೃದಯದಲ್ಲಿ ಭಕ್ತಿಯ ಬುಗ್ಗಿ ಚಿಮ್ಮಬೇಕಾದರೆ ಗುರುಕೃಪೆಯೇ ಬೇಕು. ಗುರು ನಮ್ಮ ಅಹಂಕಾರ ಕುಗ್ಗಿಸಿ ಭಕ್ತಿಯ ಬುಗ್ಗಿ ಹೊರ ಹೊಮ್ಮುವಂತೆ ಮಾಡುತ್ತಾನೆ ಶಿವನುವಲಿಯುವದು ಜಾದಿಗಲ್ಲ ಅಹಂಕಾರರಹಿತ ಭಕ್ತಿಗೆ. ಅಂತೆಯೇ ಬಸವಣ್ಣನವರು ಹೇಳುವಂತೆ "ಶಿವನು ನಾದಪ್ರಿಯನೂ ಅಲ್ಲ, ವೇದಪ್ರಿಯನೂ ಅಲ್ಲ, ಭಕ್ತಿ ಪ್ರಿಯ ನಮ್ಮ ಕೂಡಲ ಸಂಗಮದೇವಾ" ಎಂದು ಹೇಳಿರುವಂತೆ ಭಕ್ತಿಯಿಂದಲೇ ಆಧ್ಯಾತ್ಮಿಕ ಸಾಧನೆ ದೊರೆ-ಯುತ್ತದೆ. ಅಂಥ ಭಕ್ತಿಯನ್ನು ಮೂಡಿಸುವವನು ಗುರುವಾಗಿದ್ದಾನೆ. ಆದುದರಿಂದ ಗುರುಸೇವೆ ಮಾಡಿ ಗುರುವಿನ ನೆರವು ಪಡೆಯುವುದೇ ಮುಕ್ತಿಗೆ ಮೂಲಾಧಾರವಾಗಿದೆ.

ಜಗತ್ತಿನಲ್ಲಿ ಒಬ್ಬವ್ಯಕ್ತಿಯು ಘನತೆಗೆ ಬರಬೇಕಾದರೆ ಒಬ್ಬ ಒಳ್ಳೆಯ ಗುರುವಿನ ನೆರವು ಅವಶ್ಯವಾಗಿ ಬೇಕೆ ಬೇಕು. ಗಿಡಕ್ಕೆಬಳ್ಳಿ ಹಬ್ಬಿ ಹರವಾಗುವ ತೆರದಿ ಜಗತ್ತಿನ ನಾನಾ ವ್ಯಕ್ತಿಗಳು ಮಹಾನ್ ವ್ಯಕ್ತಿಗಳ ಕೃಪಾಶ್ರಯ ಹೊಂದಿ ಮಹಿಮಾನ್ವಿತ-ರಾಗಿದ್ದಾರೆ. ಈ ರೀತಿ ನೆನೆದಾಗ ರಾಮಕೃಷ್ಣರಿಂದ ವಿವೇಕಾನಂದರು, ಗಾಂಧೀಜಿಯವರಿಂದ ನೆಹರು ಹಾನಗಲ್ಲ ಕುಮಾರ ಶಿವಯೋಗಿಗಳಿಂದ ಪಂಚಾಕ್ಷರ ಗವಾಯಿಗಳು ಗುಡದೂರು ಗುರುಬಸವಾರ್ಯರಿಂದ ಸಜ್ಜಲಗುಡ್ಡದ ಶರಣಮ್ಮನವರು ಮಹಾ ಬೆಳಕಿನ ಬೆಳಕಾದರು. ಪರುಷವು ಲೋಹವನ್ನು ಬಂಗಾರವನ್ನಾಗಿ ಮಾಡುವಂತೆ ಸದ್ಗುರುವಿನ ದರ್ಶನ ಆಶೀರ್ವಾದ ಶಿಷ್ಯರನ್ನು ಉದ್ಧರಿಸುತ್ತಾರೆ. ಸದ್ಗುರು ಸಚ್ಛಿಷ್ಯರು ಒತ್ತಟ್ಟಿಗೆ ಸೇರಲು ಆಧ್ಯಾತ್ಮ ಪ್ರಕಾಶವು ಚಿಮ್ಮುವುದು. "ಶಿಕೋಪ ನಿಷತ್ತಿನಲ್ಲಿ" ಗುರುಬ್ರಹ್ಮಾ, ಗುರುವಿಷ್ಣು, ಗುರುದೇವೊ ಮಹೇಶ್ವರ. ಏಕೆಂದರೆ ಗುರು ಸಂಸಾರ ದಾಟಿಸಿ, ಜೀವನ ನಿಲುವು ತೋರಿಸಿ ಕೊಟ್ಟು ನಮ್ಮನ್ನು ದೇವಾಂಶರನ್ನಾಗಿ ಮಾಡುವ ಶಕ್ತಿ ಮತ್ತು ಬಲವು ಗುರುವಿನಲ್ಲಿ ಇದೆ.





## ನಿಜಗುರು ಮಹಾಂತಲಿಂಗ

ಡಾ॥ ಜಯಶ್ರೀ ದಂಡೆ, ಸಂಪಾದಕಿ 'ಕವಿಮಾರ್ಗ' ಸರಸ್ವತಿಪುರ, ವಿ.ವಿ. ಅಂಚೆ ಕಲಬುರ್ಗಿ-6

೧ ಸಮುದ್ರದಲಿ ತೇಲುತಿಹುದು ಜಲವಾಸಿ ಹಕ್ಕಿ
ಈಗೋ ಇನ್ನೊಂದು ಗಳಿಗೆಗೋ ಅದಕೆ ಜೀವನ್ಮುಕ್ತಿ.
ಒಳ ಸಮುದ್ರದಲ್ಲಿರುವುದು ಇನ್ನೊಂದು ಹಕ್ಕಿ.
ಆ ಹಕ್ಕಿಯ ಕಂಡು ಚಡಪಡಿಸುತಿಹವು ಬೇರೆ ಹಕ್ಕಿಗಳು.
ಅಯ್ಯೋ! ಹಾರಿಬಿಟ್ಟಿತೇ ಹರಣ!
ದುಷ್ಟ ಜನರ ಕುತಂತ್ರದಿಂದ!
ನನ್ನೊಳಗಿನ ಹಕ್ಕಿಯ ರಕ್ಷಣೆಯೆಂತೋ?!
ಅರುಹಿಕೊಡಾ ನಿಜಗುರು ಮಹಾಂತಲಿಂಗ.

೨ ಒಂದನ್ನು ಕಟ್ಟಿಕೊಂಡು,
ಐದನ್ನು ಹಿಡಿದುಕೊಂಡು
ಆರರಲ್ಲಿ ಅಡಿಯಿಟ್ಟು
ಎಂಟರ ಗಂಟು ಕಟ್ಟಿ
ಓಡುತಿದೆ ಚಿತ್ತ ಕೈ ಬಿಟ್ಟು ಕಾಣಾ,
ನಿಜಗುರು ಮಹಾಂತಲಿಂಗ

೩ ಕತ್ತೆಯನು ಹೊತ್ತಿರುವರು ಐವರು
ಐವರೊಂದಿಗೆ ಏಳು ಜನ ಸೇರಿರುವರು
ಐವರ, ಏಳುಜನರ ತುಳಿಯಿತು ಹಂದಿ
ಕೊರಳಲ್ಲಿ ಒಂದನ್ನು ಕಟ್ಟಿತು.
ಎರಡಿಲ್ಲದೆ ಒಂದಾಗುವಂತಾಯಿತು.
ನೋಡಾ, ನಿಜಗುರು ಮಹಾಂತಲಿಂಗ.

೪ ಉಂಡರೊಂದು ಚಿಂತೆ, ಉಟ್ಟರೊಂದು ಚಿಂತೆ
ಉಣ್ಣದೆ ಇರಲಾಗದು, ಉಡದೆ ಬದುಕಲಾಗದು.
ಉಂಡುಟ್ಟು ಎಲ್ಲರಿಗೂ ಬೇಕಾಗಿರುವಂತೆ
ಕರುಣಿಸಾ ನಿಜಗುರು ಮಹಾಂತಲಿಂಗ.

೫ ವ್ಯಾಘ್ರನೊಂದು ಗೋವಿನ ಸಂಗ ಮಾಡಿ
ಅರಣ್ಯವ ಹಾಳುಮಾಡಿ,
ಕೇಕೆ ಹಾಕುತಿದೆ ಕುಣಿದಾಡಿ,
ಗೋವು ಕೊಟ್ಟಿಗೆಯೊಡನೆ ಕಡಿದಾಡಿ,
ವ್ಯಾಘ್ರ ಅರಣ್ಯವ ಹಾಳು ಮಾಡಿ,
ಒಂದನ್ನು ಹಿಡಿದು, ಎರಡನ್ನು ದೂರಮಾಡಿ,
ಒಂದಾಗಿ ಬಾಳುತಿವೆ ಒಂದೆ ಕೊರಳಿನಿಂದ ಕೂಗಾಡಿ.
ಇದು ಅಚ್ಚರಿ ಕಾಣಾ,
ನಿಜಗುರು ಮಹಾಂತಲಿಂಗ

## ಮಾನಸಿಕ-ಶಕ್ತಿಗಳು ಮುಂದುವರೆದ ಲೇಖನ

ದೇವೇಂದ್ರಪ್ಪ, ಮಹಾದೇವಪ್ಪ ಬಡಿಗೇರ, ಶ್ರೀ ಗಾಯತ್ರಿ ಉಚಿತ ಆಯುರ್ವೇದ ಚಿಕಿತ್ಸಾಲಯ, ಗೋಕುಲ. ತಾ॥ ಹುಬ್ಬಳ್ಳಿ, ಜಿ. ಧಾರವಾಡ.

**ಮನುಷ್ಯನ ಕಣ್ಣುಗಳ ಶಕ್ತಿ :** ಕಣ್ಣುಗಳೆಂದರೆ ಆತ್ಮಕ್ಕೆ ಕನ್ನಡಿ ಇದ್ದಂತೆ ಎಂದು ಹೇಳಲಾಗಿದೆ. ಪ್ರೀತಿ, ಭೀತಿ, ಅಸೂಯೆ, ರೋಷ, ಅಪರಾಧಗಳು ಧೈರ್ಯ್ಯ ಇವೇ ಮೊದಲಾದ ಭಾವನೆಗಳನ್ನು ಕಣ್ಣುಗಳು ಪ್ರತಿಬಿಂಬಿಸುತ್ತಿವೆ. ನಮ್ಮ ನಿತ್ಯದ ಜೀವನದಲ್ಲಿ ನಮ್ಮಲ್ಲಿಯ ಕಾಂತ ಶಕ್ತಿಯು ನಮ್ಮ ಕಣ್ಣುಗಳ ಮುಖಾಂತರ ಕಾರ್ಯ ಸಾಗಿಸುತ್ತವೆ. ಕಾಡುಮೃಗಗಳ ಕ್ರೂರತೆಯ ಮೇಲೆ ಮನುಷ್ಯ ದೃಷ್ಠಿ ಶಕ್ತಿಯು ಪ್ರಭಾವಬೀರಿ ಅವನ್ನು ಕುಗ್ಗಿಸಬಹುದು. ಧೈರ್ಯದಿಂದ ದೃಢವಾಗಿ ನೋಡುವುದರಿಂದ ನಮ್ಮಲ್ಲಿರುವ ಕಾಂತಶಕ್ತಿಯು ಕ್ರಿಯಾಶೀಲವಾಗುತ್ತದೆ. ನೀವು ನಿಮ್ಮ ಕಣ್ಣುಗಳು ಇನ್ನೊಬ್ಬನ ಕಣ್ಣಿನಲ್ಲಿರಿಸಿ ದೃಷ್ಠಿಸಿದಾಗ ನಿಮ್ಮ ಕಾಂತಶಕ್ತಿಯು ಅವನನ್ನು ನಿಮ್ಮೆಡೆಗೆ ಆಕರ್ಷಿಸುತ್ತದೆ. ನೀವು ಅವನನ್ನು ನೋಡುವಾಗ ನೀವು ನಿಮ್ಮ ಮನಸ್ಸಿನ ಎಲ್ಲ ಶಕ್ತಿಯನ್ನು ನಿಮ್ಮ ನೋಟದಲ್ಲಿರಿಸಿ ಅವನ ಮೇಲೆ ಬೀರಿದಾಗ ಅವನ ಮೇಲೆ ಗಾಢವಾದ ಪ್ರಭಾವವು ಬೀಳುವದು. ಈ ಶಕ್ತಿಯನ್ನು ದುರುದ್ದೇಶಗಳಿಗಾಗಿ ಬೀಳಿಸ ಬಾರದು. ಯಾರೊಬ್ಬರ ಪ್ರಭಾವಕ್ಕೆ ನೀವುಒಳಗಾಗಬಾರದೆಂದು ಬಯಸುತ್ತಿದ್ದರೆ ಅವರ ಕಣ್ಣಿನ ನೋಟಕ್ಕೆ ನಿಮ್ಮ ದೃಷ್ಠಿಯನ್ನು ನೀಡದೇ ದೇಹದ ಯಾವದೋ ಬೇರೆ ಭಾಗವನ್ನು ನೋಡುತ್ತಿರಬೇಕು.

**ದೃಷ್ಠಿ ಪ್ರಯೋಗಕ್ಕೆ ಅಭ್ಯಾಸ:-** ನಾವು ನಿತ್ಯ ಜೀವನದಲ್ಲಿ ಬೇರೆಯುವರ ಜೊತೆಗೆ ಹೊಂದುವ ಸಂಪರ್ಕವು ಹೆಚ್ಚು ದೃಢವಾಗುವದಕ್ಕೆ ನಿಮ್ಮ ಕಾಂತ ಶಕ್ತಿಯು ಕಣ್ಣುಗಳ ಮುಖಾಂತರ ಕಾರ್ಯ ನಡೆಸುವುದೇ ಕಾರಣ. ಈ ವಿಷಯದಲ್ಲಿ ಪರಿಣಿತರಾದವರು ಹೆಚ್ಚು ಆಕರ್ಷಕವಾದ ಮತ್ತು ತೀಕ್ಷ್ಣವಾದ ದೃಷ್ಠಿಯನ್ನು ನಾವು ಹೀಗೆ ಬೀರಬಹುದು. ಎಂಬ ಬಗ್ಗೆ ಕೆಲವು ಅಭ್ಯಾಸವನ್ನು ಯೋಜಿಸಿದ್ದಾರೆ.

**ಅಭ್ಯಾಸ:-** ಕನ್ನಡಿ ಎದುರುನಿಂತು: ನಿಮ್ಮ ಕಣ್ಣುಗಳಲ್ಲಿಯೇ ದೃಷ್ಠಿಯಿರಿಸಿ ಬೇಕಾದಷ್ಟು ವೇಳೆಯವರೆಗೆ ಎಷ್ಟೂ ಅಳುಕದೆ ದೃಢವಾಗಿ ನೋಡಲು ಸಾಧ್ಯವಾದಂತೆ ಅಭ್ಯಾಸ ಮಾಡಿರಿ. ನಿತ್ಯ ಜೀವನದಲ್ಲಿ ಯಾರೊಬ್ಬರನ್ನು ನೋಡುವಾಗ್ಲಲೂ ಧೈರ್ಯವಾಗಿ ನೋಡುವದನ್ನು ರೂಢಿಸಿಕೊಳ್ಳಿರಿ ಎಷ್ಟೋ ಸೆಕೆಂಡುಗಳವರೆಗೆ ನಿಮ್ಮ ದೃಷ್ಠಿ ಮತ್ತು ಲಕ್ಷ್ಯ ವಿಚಲಿತವಾಗದಂತೆ ಕಣ್ಣು ಪಿಳಿಕಿಸದೆ ಒಂದು ವಸ್ತುವಿನ ಮೇಲೆ ನಿಮ್ಮ ದೃಷ್ಠಿಯನ್ನು ಸ್ಥಿರಗೊಳಿಸಲು ರೂಢಿಸಿಕೊಳ್ಳಿ. ಕ್ರಮೇಣ ಪ್ರಯೋಗದ ಕಾಲವನ್ನು ಬೆಳೆಸುತ್ತ ಹೋಗಿರಿ. ಅನಂತರ ಒಂದು ಹೊಳಪುಳ್ಳ ವಸ್ತುವನ್ನು ಕಣ್ಣಿಗೆ ಯಾವುದೇ ತೊಂದರೆಯಾಗದಂತೆ ಎಷ್ಟೋ ನಿಮಿಷಗಳವರೆಗೆ ನೋಡುವುದನ್ನು ರೂಢಿಸಿಕೊಳ್ಳಿ.



ನಿಮ್ಮಿಂದ 2 ಅಥವಾ 3 ಫೂಟು ಅಂತರದ ಮೇಲೆ ನಿಮ್ಮ ದೃಷ್ಠಿಪಾತಳಿಗೆ ಸಮವಾದ ಸ್ಥಾನದಲ್ಲಿ ಗೋಡೆಯ ಮೇಲೆ ಗುರುತಿಸಿದ ರೂಪಾಯಿ ಗಾತ್ರದ ಕಪ್ಪು ಬಿಂಬವೊಂದನ್ನು ನೋಡುವ ಅಭ್ಯಾಸ ಮಾಡಿಕೊಳ್ಳಿ. ದಿನಾಲು ಮುಂಜಾನೆ ಮತ್ತು ಸಂಜೆಗೆ ಈ ಬಗೆಯ ಅಭ್ಯಾಸ ನಡೆಯಿಸಿರಿ. ಹೀಗೆ ನೋಡುತ್ತಿರುವಾಗ ಆದಷ್ಟು ವೃತ್ತದ ಸುತ್ತಲೂ ಹೊಳೆಯುವ ತೇಜೋವಲಯವು ಮಾತ್ರ ನಿಮಗೆ ಗೋಚರಿಸಿ ಆವೃತ್ತವು ನಿಮಗೆ ಕಾಣದಾಗುತ್ತದೆ. ಈ ಹಂತವನ್ನು ನೀವು ತಲುಪಿದರೆ ಏಕಾಗ್ರತೆಯನ್ನು ನೀವು ಸಾಧಿಸಿದರೆಂದೂ, ಇತರರ ಮೇಲೆ ಪ್ರಭಾವ ಬೀರುವಷ್ಟು ಕಾಂತ ಶಕ್ತಿಯು ನಿಮ್ಮ ಕಣ್ಣಿನ ನೋಟದಲ್ಲಿ ಬಂದಿದೆ ಎಂದು ಅರ್ಥ.

**ಕೇಡುಗಣ್ಣು :-** ಯಾವನೊಬ್ಬ ವ್ಯಕ್ತಿಯು ಒಳ್ಳೆಯ ಮನಸ್ಸಿನವನಾಗಿದ್ದರೆ ಅವನ ವೈಯಕ್ತಿಕ ಕಾಂತ ಶಕ್ತಿಯೂ ಕೂಡಿ ಎಲ್ಲಾ ರೀತಿಯಿಂದಲೂ ಒಳ್ಳೆಯದೇ ಆಗುತ್ತದೆ. ಆದರೆ ಕೆಲವು ಜನರು ದುಷ್ಟಮನಸ್ಸಿನವರಾಗಿರುತ್ತಾರೆ. ಅವರ ಕಣ್ಣಿನಿಂದ ಹೊರಡುವ ಕಾಂತ ಶಕ್ತಿಯು ಕೆಟ್ಟದ್ದೇ ಆಗಿರುತ್ತದೆ. ಇದಕ್ಕೆ ಸಾಮಾನ್ಯವಾಗಿ "ಕೇಡುಗಣ್ಣು" ಎಂದು ಕರೆಯುವರು. ಕೇಡುಗಣ್ಣು ಮನುಷ್ಯನಲ್ಲಿರುವ ಅಸೂಯೆಯ ಭಾವನೆಯ ಮೇಲೆ ಆಧಾರಿತವಾಗಿದೆ. ಮನುಷ್ಯನ ಕಾಂತ ಶಕ್ತಿಯು ಯಾವಾಗಲೂ ಅವನ ಕಣ್ಣುಗಳೊಳಗಿಂದ ಹೊರಹೊಮ್ಮುತ್ತದೆಂದು ಮೇಲೆಯೇ ಹೇಳಿದೆ ಕೆಲವೊಂದು ವ್ಯಕ್ತಿಗಳಲ್ಲಿ ಮಾತ್ರ ಈ ಕೇಡುಗಣ್ಣಿನ ಕಾಂತ ಶಕ್ತಿಯೂ ಇರುತ್ತದೆ. ಇಟಲಿ, ಸ್ಪೇನ್, ಆಸ್ಟ್ರೇಲಿಯಾ, ಮೊದಲಾದ ಅನೇಕ ದೇಶಗಳಲ್ಲಿ ಕೇಡುಗಣ್ಣಿನಿಂದ ನೋಡಲ್ಪಟ್ಟ ದನಕರುಗಳು ತಪ್ಪದೆ ಅಪ್ಪಷ್ಠವಾಗಿ ಸತ್ತುಹೋಗುತ್ತವೆಂಬ ನಂಬಿಕೆ ಇದೆ. ಈ ಕೇಡುಗಣ್ಣಿನ ಶಕ್ತಿಯು ಯಾರಿಗೂ ಬಯಸಿ ಬಂದದ್ದಲ್ಲ ಅದು ತಾನಾಗಿಯೇ ಕೆಲವರಲ್ಲಿ ಕಂಡುಬರುತ್ತದೆ. ಈ ಕೇಡುಗಣ್ಣಿನ ಕಾಂತ ಶಕ್ತಿಯಿಂದ ರಕ್ಷಣೆ ಪಡೆಯಲು ಒಂದು ಉಪಾಯವನ್ನು ಹೇಳಿದ್ದಾರೆ. ಕೈ ಬೆರಳುಗಳಲ್ಲಿ ಕಿರಿಬೆರಳು ಮತ್ತು ತೋರು ಬೆರಳು ಕೂಡಿಸಿ ಕೇಡು ಗಣ್ಣಿನವನ ಕಡೆಗೆ ಚಾಚಿ ನಡುವಿನ ಎರಡೂ ಬೆರಳುಗಳನ್ನು ಅಂಗೈಯೊಳಕ್ಕೆ ಹೆಬ್ಬೆರಳಿನಿಂದ ಒತ್ತಿ ಹಿಡಿಯಬೇಕು. ಆಗ ಕೈ ಆಕೃತಿಯು ಒಂದು ಎತ್ತಿನ ಎರಡು ಕೋಡುಗಳನ್ನು ಹೋಲುತ್ತದೆ.

ಮಿ॥ ಲೆಬ್ರಾನ್ ಎಂಬುವರು ಹೀಗೆ ಬರೆದಿದ್ದಾರೆ. ಸಾಮಾನ್ಯವಾಗಿ ಜನರು ಇಂಥ ಶಕ್ತಿಗಳ ವ್ಯಕ್ತಿತ್ವವನ್ನು ನಂಬುವದಿಲ್ಲ ಎಂಬ ಕಾರಣದಿಂದ ಅಂತಹ ಶಕ್ತಿಗಳು ಇರುವದೇ ಅಶಕ್ಯವೆಂಬ ನಿರ್ಧಾರಕ್ಕೆ ಬರಬಾರದು ಏಕೆಂದರೆ ಮನುಷ್ಯನ ಅಭಿಪ್ರಾಯವು ಏನೇ ಇದ್ದರೂ ಅದರಿಂದ ಸೃಷ್ಠಿಯ ಶಕ್ತಿಗಳಿಗೆ ಕಡಿವಾಣ ಬೀಳಲಾರದು. ಕೆಲವೊಂದು ದೇಶಗಳಲ್ಲಿ ಕೇಡುಗಣ್ಣಿನ ಬಾಧೆಗೆ ಈಡಾದವರನ್ನು ಗುಣಪಡಿಸಲು

ಸ್ವಲ್ಪ ಉಪ್ಪು ಮತ್ತು ಮೆಣಸಿನಕಾಯಿಗಳನ್ನು ಕೈಯಲ್ಲಿ ತೆಗೆದುಕೊಂಡು ಆ ವ್ಯಕ್ತಿಯ ತಲೆಯ ಸುತ್ತಲೂ ಮೂರು ಸಲ ತಿರುಗಿಸಿ ಉರಿಯುವ ಒಲೆಯಲ್ಲಿ ಚೆಲ್ಲಿ ಬಿಡುವರು. ಕೇಡು ಗಣ್ಣಿನ ಬಾಧೆಯು ತೀವ್ರವಾಗಿದ್ದರೆ ಈ ವಿಧಾನವನ್ನು ಮೂರು ಸಲ ಪ್ರಯೋಗಿಸುತ್ತಾರೆ. ಕೆಲವು ಜನರು ಬರೀ ಉಪ್ಪನ್ನು ಮಾತ್ರ ತೆಗೆದುಕೊಂಡು ಪೀಡಿತ ವ್ಯಕ್ತಿಯ ತಲೆಯ ಮೇಲೆ ಮೂರು ಸಲ ತಿರುಗಿಸಿ ಆ ಬಳಿಕ ಅದನ್ನು ನೀರಿನಲ್ಲಿ ಕರಗಿಸಿ ಅದನ್ನು ಹೊರಗೆ ಚೆಲ್ಲುತ್ತಾರೆ. ಕೆಲವು ಕಡೆಗೆ ಒಂದು ತೆಂಗಿನ ಕಾಯಿಯನ್ನು ಮೇಲಿನಂತೆಯೇ ನಿವಾಳಿಸಿ ಮನೆಯ ಹೊರಗೆ ಒಯ್ದು ಚೆಲ್ಲುತ್ತಾರೆ. ಕೆಲವರು ಲಿಂಬೆಹಣ್ಣನ್ನು ಕೆಂಪು ಅಕ್ಕಿಕಾಳುಗಳನ್ನು ಇದಕ್ಕೆ ಉಪಯೋಗಿಸುತ್ತಾರೆ. ಪ್ರತಿಯೊಂದು ಹಿಂದೂ ಮದುವೆಯಲ್ಲಿ ಮೇಲೆ ಹೇಳಿದ ವಿಧಾನಗಳಲ್ಲಿ ಯಾವದೇ ಒಂದನ್ನು ಕೊನೆಗೆ ಆಚರಿಸಿ ಆ ಸಮಾರಂಭದಲ್ಲಿ ಮದು ಮಕ್ಕಳು ಕೇಡುಗಣ್ಣಿನವರ ದೃಷ್ಟಿಯಿಂದ ಬಾಧಿತರಾಗದಂತೆ. ನೋಡಿ ಕೊಳ್ಳುತ್ತಾರೆ. ಯಾವನಾದನೊಬ್ಬನು ಒಂದು ಮುದ್ದು ಮಗುವನ್ನು ಪ್ರಶಂಸಿಸಿದರೆ ಒಂದು ಕುದುರೆ ಇನ್ನಾವದೋ ಬಹು ಮುಖ್ಯ ವಸ್ತುವನ್ನು ಹೊಗಳಿದರೆ ಆದರಿಂದ ಆ ವ್ಯಕ್ತಿಗೆ ಏನೋ ಕೇಡುಕಾದಿದೆ ಎಂದು ತಿಳಿಯುತ್ತಾರೆ. ಇಂತಹ ಸಂದರ್ಭಗಳಲ್ಲಿ ಕೈ ಬೆರಳಿಗೆ ಉಗಳನ್ನು ಹಚ್ಚಿ ಆ ವಸ್ತುವಿನ ಅಥವಾ ಪ್ರಾಣಿಯಮೇಲೆ ಮೂರು ಸಲ ಎಳೆದರೆ ಅದರ ಬಾಧೆಯು ತಟ್ಟುವುದಿಲ್ಲವೆಂದು ನಂಬಿಕೆ ಇದೆ.

### ಪ್ರಿಯ ಓದುಗರಿಗೆ ಸೂಚನೆ

ವಿಳಾಸಗಳ ಬದಲಾವಣೆಯಿಂದಾಗಿ ಅನೇಕ ಆಜೀವ ಸದಸ್ಯರುಗಳಿಗೆ ಪತ್ರಿಕೆಗಳು ತಲುಪದೆ ನಮ್ಮ ಕಾರ್ಯಾಲಯಕ್ಕೆ ವಾಪಸಾಗುತ್ತಿವೆ. ಪ್ರಯುಕ್ತ **'ಸಿದ್ಧಗಂಗಾ'** ತಪ್ಪದೆ ಪ್ರತಿ ತಿಂಗಳು ನಿಮ್ಮ ಕೈಸೇರಲು ಬದಲಾದ ವಿಳಾಸವನ್ನು ಮರೆಯದೆ ಶೀಘ್ರವಾಗಿ ಆಜೀವ ಸದಸ್ಯತ್ವದ ನಂಬರ್ ಸೂಚಿಸಿ ತಿಳಿಸಬೇಕಾಗಿ ಕೋರುತ್ತೇವೆ.

ಈ ನಂಬರ್/ಸಂಖ್ಯೆ ನಿಮ್ಮ ವಿಳಾಸದ ಎಡಭಾಗ ಮೇಲ್ತುದಿಯಲ್ಲಿರುತ್ತದೆ. ಗುರುತಿಸಿಕೊಳ್ಳಿರಿ.

ಪ್ರಕಾಶಕರು,
**ಸಿದ್ದಗಂಗಾ ಮಾಸಪತ್ರಿಕೆ,**
ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ-572104.

## ಬಸವತತ್ವ ರತ್ನಾಕರ–19.

ಮೋಟಗಿ ಮಲ್ಲಿಕಾರ್ಜುನ "ಕನ್ನಡ ಕವಿ ಕಾಳಿದಾಸ" ಅಥಣಿ (ಬೆಳಗಾವಿ ಜಿಲ್ಲೆ)

### 168. ಪ್ರಾಚೀನ ವಚನ ಸಾಹಿತ್ಯ ಪ್ರಕಟನಾ ಕಾರ್ಯ

"ಶ್ರೀ ಬಸವಾದಿ ಪ್ರಮಥರಾ ಅಗಣಿತ ವಚನ ವಾಙ್ಮಯವು
ಬಾಂದಳದೆತ್ತರಕೆ ಬೆಳೆದು ನಿಂದಿದೆ ನೋಡಾ!
"ಸಾವಿರಮಂದಿ ಕೂಡಿ ನೂರುವರುಷ ಕೆಲಸಮಾಡಿದರೂ
ಮುಗಿಯಲಾರದಷ್ಟು ವಚನಸಾಹಿತ್ಯವಿದೆ"
ಎಂದು ಆತ್ಮ ಬಂಧು ಡಾ|| ಆರ್.ಸಿ. ಹಿರೇಮಠ, ಎನ್ನುತ್ತಾರೆ ನೋಡಾ!
ಇಂತು ಅನಿರ್ಣೀತವಾದ ಪರ್ವತ ಪ್ರಾಯವಾಗಿ
ಬೆಳೆದು ನಿಂದಿರ್ದ ಶಿವಶರಣರಾ ವಚನ ಸಾಹಿತ್ಯ ವಿಶ್ವವಿಶಾಲವಾಗಿರ್ಪುದು ನೋಡಾ!
ಅನರ್ಘ್ಯ ರತ್ನಗಳೆನಿಸಿದೀ ಅಪಾರ ಪ್ರಾಚೀನ ವಚನ ತಾಡಓಲೆಯಾ
ಗ್ರಂಥಗಳ ಸಂಶೋಧನಾ ಕಾರ್ಯವಿಂದು ಬಲುಕಠಿಣವಾಗಿಹುದು ನೋಡಾ!
ಸಂಪಾದಿತ ಗ್ರಂಥಗಳ ಸಂಸ್ಕರಣಕಾರ್ಯ ಮತ್ತಷ್ಟು ದುಸ್ತರವಾಗಿಹುದು ನೋಡಾ!
ಇಂತು ಸಂಶೋಧನ-ಸಂಸ್ಕರಣ ಸಂಗ್ರಹಕಾರ್ಯಗಳೆಲ್ಲಕೂ
ಎಮ್ಮ ಅಣ್ಣಯ್ಯನೇ ಅಗ್ರಗಣ್ಯ ನೋಡಾ!
ಈದಿವ್ಯ ಚೇತನಾತ್ಮಕ ಮೌಲಿಕ ಆತ್ಮ ಸಾಹಿತ್ಯ ಇಂದು ಪರಿಷ್ಕರಣಗೊಂಡು
ಬೆಳಕು ಕಂಡಷ್ಟು, ಲೋಕಕ್ಕೆ ಬೆಳಕು ಹೆಚ್ಚುವುದು ನೋಡಾ!
ವ್ಯತ್ಯದ ಮನುಕುಲಕ್ಕೆ ಈ ವಚನ ಮೌಕ್ತಿಕಗಳೆಲ್ಲ ಜ್ಞಾನದೀಪ್ತಿಗಳಾಗಿ ಹೊಳೆದು
ಆತ್ಮೋನ್ನತಿಗೆ ಕಾರಣವಾಗಿ ಸುಖಶಾಂತಿ ಲಭಿಸುವುದು ನೋಡಾ!
ಇಂತು ಶುಭಯೋಗ ಬೇಗ ಜಗಕೆ ಕರುಣಿಸಾ, ಶ್ರೀಶೈಲಮಲ್ಲಿಕಾರ್ಜುನ!"

### 169– ಶ್ರೀ ಚೆನ್ನಪ್ಪ ಉತ್ತಂಗಿ 'ಅನುರವಾಣಿ'

"ವಿಶ್ವವಿಭೂತಿ ಭಕ್ತಿ ಭಂಡಾರಿ ಮಹಾನುಭಾವಿ ಶ್ರೀ ಬಸವೇಶ್ವರ-
ತತ್ತ್ವವನು ಲಿಂಗಾಯತರು ಚೆನ್ನಾಗಿ ತಿಳಿದುಕೊಂಡಿಲ್ಲವಾದ್ದರಿಂದ,
ಶ್ರೀ ಬಸವಣ್ಣನವರನ್ನು ಲಿಂಗಾಯತರು ತಿಳಿದುಕೊಂಡಿಲ್ಲ,
ಬುದ್ಧ ತತ್ತ್ವವನು ಬೌದ್ಧರು ಸರಿಯಾಗಿ ಅರಿತುಕೊಂಡಿಲ್ಲ,
ಬುದ್ಧಮಹಾತ್ಮನನ್ನು ಬೌದ್ಧರು ತಿಳಿದುಕೊಂಡಿಲ್ಲವಾದ್ದರಿಂದ,
ಕ್ರಿಸ್ತತತ್ತ್ವವನು ಕ್ರೈಸ್ತರು ಚೆನ್ನಾಗಿ ತಿಳಿದು ಕೊಂಡಿಲ್ಲವಾದ್ದರಿಂದ,
ಕ್ರಿಸ್ತ ಮಹಾತ್ಮನನ್ನು ಕ್ರೈಸ್ತರು ತಿಳಿದುಕೊಂಡಿಲ್ಲ.



ಮುಹಮ್ಮದ ಪೈಗಂಬರ ತತ್ತ್ವವನು ಮುಸ್ಲಿಮ್‌ರು ಸರಿಯಾಗಿ ತಿಳಿದುಕೊಂಡಿಲ್ಲವಾದ್ದರಿಂದ,
ಮುಹಮ್ಮದ ಪೈಗಂಬರರನ್ನು ಮುಸ್ಲಿಮರು ತಿಳಿದುಕೊಂಡಿಲ್ಲ.
ಶ್ರೀ ಬಸವಣ್ಣನವರಿಗೆ ವಿರಕ್ತರು ಅಂತರಂಗ ವಿರೋಧಿಗಳಾದರೆ,
ಗುರುವರ್ಗದವರು ಬಹಿರಂಗ ವಿರೋಧಿಗಳಾಗಿದ್ದಾರೆ"
ಇಂತು ಪೂಜ್ಯ ಉತ್ತಂಗಿ ಚೆನ್ನಪ್ಪನವರ ಅನುರವಾಣಿ!
ಕೇಳಾ, ಶ್ರೀಶೈಲಮಲ್ಲಿಕಾರ್ಜುನ"!

### 170 ಆಧುನಿಕ ಅನುಭವ ಮಂಟಪ

"ಚೆನ್ನಕೀರ್ತಿಯಾಂತ ಧಾರವಾಡ ಮುರುಘಾಮಠವು
ಕನ್ನಡ ಲೋಕದಲಿ 'ಆಧುನಿಕ ಅನುಭವಮಂಟಪ'
ವೆನಿಸಿ ಮೆರೆಯುತ್ತಿದೆ ನೋಡಾ!
ಉನ್ನತ ಕೃಪಾಂಬುಧಿಸ್ವಾಮಿ ಮೃತ್ಯುಂಜಯಪ್ಪಗಳು
ದಿವ್ಯದೃಷ್ಟಿದಳೆದು ಬೆಳಗುತಿಪ್ಪರು ನೋಡಾ!
ಮುನ್ನ ಸ್ಥಾಪಿಸಿರ್ದ 'ಪ್ರಸಾದನಿಲಯ'ವಲ್ಲಿ ಚೆಂದದಿಂ
ತ್ರಿವಿಧ ದಾಸೋಹಕ್ಕೆ ಹೆಸರಾಗಿಹುದು ನೋಡಾ!
ನನ್ನಿ ಶರಣ ಕವಿಗಳಾ ಪ್ರಾಚೀನ ವಾಙ್ಮಯವನ್ನು
ಸ್ವಾಮಿ ಮುದ್ರಿಸಿ ಕನ್ನಡದ ಕೈಗಿಡಲು
ಕನ್ನಡ ಮಾತ್ರವಲ್ಲ ಇಡಿಯ ಭರತವರ್ಷಕ್ಕುಪಕಾರವಾಯ್ತು ನೋಡಾ!
ಜ್ಞಾನ-ಭಕ್ತಿ-ವೈರಾಗ್ಯ ಧರ್ಮಭಾವನೆ ಬೆಳೆದು ಬರಲು ಭಕ್ತವೃಂದದಲ್ಲಿ
ತಾನೆ ಈಗ "ವೀರಶೈವಧರ್ಮ" (ಲಿಂಗಾಯತ ಧರ್ಮ) ಉನ್ನತಿಗೆ ಕಾರಣವಾಯ್ತು ನೋಡಾ!
ಅರುವತ್ತುಮೂರು ಪುರಾತನರ ಸ್ಮಾರಕವೆಂಬಂತೆ
ಅರುವತ್ತು ಮೂರು ಸ್ಮೃತಿಮಂದಿರಗಳಲ್ಲಿ ರಾಜಿಸುತಿಪ್ಪುವು ನೋಡಾ!
ವರಪುರ ಮದಘಣಿ "ಶಿವಯೋಗ ಅಮೃತ ಶಿಲಾಪುತ್ಥಳಿ"ಯು,
ಮಧ್ಯನಿಲಯದಿ ತೇಜಃಕಲಿತು ಬೆಳಗುತಿರಲು,
ಮುರುಘಾಮಠವು 'ಆಧುನಿಕ ಅನುಭವಮಂಟಪ'
ವಾಗಿ ಮೆರೆಯುತಿಪ್ಪುದು ನೋಡಾ!
ಶಿವಯೋಗಿ ಶಿಷ್ಯರಾಗಿ ಬಂಗಾರ ಬೆಳಕಾಗಿ ಬೆಳಗುತಿರ್ಪಾ
ಲಿಂಗೈಕ್ಯ ಸ್ವಾಮಿ ಪೂಜ್ಯ ಮೃತುಂಜಯಪ್ಪಗಳಾ
ತವೆ ಭಕ್ತಿ ಸಂಪನ್ನ ಪರಮ ಶಿಷ್ಯರೆನೆ ಸ್ವಾಮಿ ಮಹಾಂತಪ್ಪಗಳೆಂದು
ಶಿವಲಿಂಗರತಿ ಗುರುಕುಲ ತಿಲಕರೆನಿಸಿ ಬೆಳಗುತಿರಲು ಮಠದಿನಿಂದು
ನವಶಕ್ತಿ ಚೈತನ್ಯ ಸದ್ಭಕ್ತಿ ಪಾರಮ್ಯ ಅಭಿವೃದ್ಧಿಗೊಳಿಸುತ್ತೆ
ಭಕ್ತತತಿಗೆ ಮುಕ್ತಿ ಕೈವಲ್ಯ ದಾನ ಮಾಡುತ್ತಿಪ್ಪರು ನೋಡಾ!

ಮುರುಘಾಮಠದ ಪಾಠ ಪ್ರಕಟನಾ ಕೃತಿರತ್ನಗಳೊಳು ಇಂದಿನಾ ಬೃಹದ್ಗ್ರಂಥವೆನೆ
ಕುಲಪತಿ ಡಾ. ಆರ್. ಸಿ. ಹಿರೇಮಠರವರ ಸಂಪಾದನಾಕೃತಿ ಬಸವಪುರಾಣ
(ಭೀಮ ಕವಿ ಕೃತಮಿದು ಅನರ್ಘ್ಯ ರತ್ನ ನೋಡಾ! ಈ ಬಸವಪುರಾಣ
ಮೊದಲಾದ ಶ್ರೀ ಮಠದ ಕೃತಿರತ್ನಂಗಳೆಲ್ಲಮಂ ಕನ್ನಡಕವಿಕಾಳಿದಾಸರಿಗೆ
ನೀಡಿ ಪೂಜ್ಯರು ಆಶೀರ್ವದಿಸಿ ಕರುಣಾಮೃತಮಂ ಸುರಿಸಿಹರು ನೋಡಾ
1956ರಲ್ಲಿ ಪೂಜ್ಯ ಮಹಾಂತಪ್ಪಗಳ ಆಶ್ರಯದಲ್ಲಿ ಪ್ರಕಟವಾದ ಧರ್ಮಜ್ಞ
ಕವಿಯ ''ದಿವ್ಯ ವಾಣಿ'' ಧಾರವಾಡ ಮುರುಘಾ ಮಠದಲ್ಲಿ ಜಾತ್ರೆಯ
ಸಮಯದಲ್ಲಿ ಚಿತ್ರದುರ್ಗದ ಪರಮಪೂಜ್ಯ ಸಿಂಹಪ್ರಾಯರಾದ
ನಿ. ಜಗದ್ಗುರುವರ್ಯರು ಜಯದೇವ ಮಹಾಸ್ವಾಮಿಗಳವರು ಅಮೃತಹಸ್ತದಿಂದ
ಬಿಡುಗಡೆ ಮಾಡುತ್ತ ''ದಿವ್ಯವಾಣಿ' ಯಿದು ''ದೇವವಾಣಿ' ಎಂದು
ಜಗದ್ಗುರುಗಳುಹರ್ಷ ಹೃದಯದಿಂದಪ್ಪಣೆ ಕೊಡಿಸಿದರು ನೋಡಾ !
ಶ್ರೀ ಮಠದ ಪಾಕ್ಷಿಕ ಪತ್ರಿಕೆಯಾದ ''ಸಾವಧಾನ' ಪಂಡಿತ ನಾಗಭೂಷಣ
ಶಾಸ್ತ್ರಿಗಳಾ
ಸಮರ್ಥ ಸಂಪಾದಕತ್ವದಲ್ಲಿ ನಾಲ್ವತ್ತೈದು ವರ್ಷಗಳಿಗೂ ಮಿಕ್ಕಿ ನಡೆದಿಹುದು
ನೋಡಾ !
ಶಿವಧರ್ಮ ತತ್ವ ಬೋಧಾತ್ಮಕ ಅನುಭಾವಿಗಳ ಲೇಖನಗಳಿಂದು
ಕಂಗೊಳಿಸುತ್ತಿಪ್ಪುವು ನೋಡಾ !
ಭಕ್ತಿಯಿಂ ''ಕನ್ನಡ ಕಾಳಿದಾಸ ''ಈ ಸಾವಧಾನ' ಪತ್ರಿಕೆಗೆ ನೂರಾರು
ಲೇಖನಗಳನು ನೀಡಿಹನು ನೋಡಾ!
ಆತ್ಮ ಬಂಧು ಜೋಳದರಾಶಿ ದೊಡ್ಡನಗೌಡರಾ "ಶೂನ್ಯ
ಸಂಪಾದನೆ" ಪ್ರವಚನ
ಗಮಕ ಕಲೆಯಾಂತು ಶ್ರೀ ಮಠದಲ್ಲಿ ಪ್ರತಿವರ್ಷ ನಡೆಯುತ್ತಿ
ಪ್ಪುದು ನೋಡಾ !
ಮುರುಘಾಮಠಕೆ ಬಂದವರೊಮ್ಮೆ ನೋಡಬೇಕು ಅಲ್ಲಿನಾ "ಅನುಭವಮಂಟಪ" ದೊಳು
ಕಂಗೊಳಿಸುತಿರ್ಪ
ಹರಗುರು ಚರಮೂರ್ತಿ ಭಕ್ತ ತಿಂತಿಣಿಯ ಬೆಳಕು! ವರಕವಿಗಳೆನೆಸರ್ವದರ್ಶನ ತೀರ್ಥ
ಒಳ್ಳಾರಿ ನಾಗೇಶ ಶಾಸ್ತ್ರಿಗಳು,
ಪದ್ಮಶ್ರೀ ಮಲ್ಲಿಕಾರ್ಜುನ ಮನ್ಸೂರ್, ಪಂ|| ಬಸವರಾಜ ರಾಜಗುರು,
ಸಂಗೀತ ಕಲಾಕೋವಿದರು ಮೇಣ್ ನಾಟ್ಯವಿಶಾರದರು–ಕರಡಿ ಮೇಳಗಳು, ಕೊಳಲು
ಸಾರಂಗ, ಪಿಟೀಲು, ವೀಣಾವಾದನಂಗಳು, ಇಂತು ಸಕಲ ಸನ್ಮಾನ್ಯದಿಂ



ಗುರು ಮೃತ್ಯುಂಜಯಪ್ಪ–ಶಿಷ್ಯಮಹಾಂತಪ್ಪಗಳಂತಹ
ಪರಮ ಪವಿತ್ರಮಪ್ಪ–ಗುರುಭಕ್ತಿಸಂಗಮದ ಮಹಾಸ್ವಾಮಿಗಳವರು
ಮತ್ತೆಲ್ಲಿ ''ಧರ್ಮಜ್ಞ ಕವಿರಾಜ ಕಾಣಲಿಲ್ಲ!
ಕೇಳಾ, ಶ್ರೀಶೈಲ ಮಲ್ಲಿಕಾರ್ಜುನ ! "

## ಶಿವಾಚಾರ ಸಂಪತ್ತು

### ತ್ರಿವಿಧ ದೀಕ್ಷೆ: [171]

" ಸದ್ಗುರು ಗೆಯ್ವ ತ್ರಿವಿಧ ದೀಕ್ಷಾಕ್ರಮವೆಂತೆಂದಡೆ:
ಕ್ರಿಯಾದೀಕ್ಷೆಯಿಂದ ತನುವಿನಾ ಜಡತ್ವವನು ಕಳೆದು,
ಮಂತ್ರ ದೀಕ್ಷೆಯಿಂದ ಮನದ ಮಾಲಿನ್ಯವನು ಕಳೆದು,
ಜ್ಞಾನದೀಕ್ಷೆಯಿಂದ ಪ್ರಾಣನ ಪಶುಭಾವವನು ಕಳೆದು
ಶ್ರೀ ಗುರುವು ಇಂತೀ ತ್ರಿವಿಧ ದೀಕ್ಷೆಯಿಂದ
ತ್ರಿವಿಧ ದೋಷಗಳನು ನಿವಾರಣೆ ಮಾಡಿ, ನಿಜ ಶಿಷ್ಯನನು
ತನ್ನಂತೆ ಮಾಡಿಕೊಳುತಿಪ್ಪನು ನೋಡಾ!
ಶ್ರೀ ಶೈಲ ಮಲ್ಲಿಕಾರ್ಜುನ!"

### ಶರಣಸತಿ ಲಿಂಗಪತಿ ಭಾವ: [172]

"ಉನ್ನತ ಗುಣವುಳ್ಳ ಸದ್ಭಕ್ತ ತಾನೆ ಸತಿ
ಲಿಂಗವೆ ಪತಿಯೆಂಬ ನಿಲುಕಡೆಯ ಸಹಜಾಚರಣೆಯೊಳಿಪ್ಪನು ನೋಡಾ!
ಈ ಸಚ್ಚರಿತ ಸಹಜಾಚರಣೆಯಲ್ಲಿ ಮನ ಎರಕವಾಗಿ
ಪಾತಿವ್ರತ್ಯಭಾವದಿಂದ ಪ್ರಾಣಲಿಂಗಾಂಗ ಸಂಗ
ಸುಖ ವಿಲಾಸದಲ್ಲಿ ನಿಷ್ಠನಾಗಿ ಭಕ್ತನು ನಲಿಯುತ್ತಿಪ್ಪನು ನೋಡಾ!
ಇಂತಪ್ಪ ಶರಣಸತಿ–ಲಿಂಗಪತಿ ಭಾವಯುಕ್ತ ಮಹಾನುಭಾವಿಯು
ಉಳಿದ ತೀರ್ಥ-ಕ್ಷೇತ್ರ ದೈವಂಗಳನೆಂದಿಗೂ ಬರೆಗೊಳ್ಳನು ನೋಡಾ!
ಶ್ರೀ ಶೈಲ ಮಲ್ಲಿಕಾರ್ಜುನ!"

### ಷಟ್‌ಸ್ಥಲ ಸಿದ್ಧಾಂತ: [173]

" ದಾಕ್ಷಿಣ್ಯ ಪರನಾಗಿರದೆ ಲೋಕ ವಿರೋಧಿಯೆನಿಸಿದಡು
ನಿರ್ಭೀತನಾಗಿರ್ದು ಲೋಕ ವಿಲಕ್ಷಣವಾಗಿಪ್ಪನು "ಭಕ್ತ"ನು ನೋಡಾ !
ಶಾಂತಮನಸ್ಕನಾಗಿ ಈಶ್ವರ ಪ್ರೀತಿಪಾತ್ರನಾಗಿಪ್ಪನು 'ಮಾಹೇಶ್ವರನು" ನೋಡಾ!
ಆ ಈಶ್ವರ ಪ್ರಸಾದಾನುಗ್ರಹವನ್ನು ಪಡೆದು ಆನವರತ
ಆನಂದದೊಳಿಪ್ಪನು ಪ್ರಸಾದಿ ನೋಡಾ!

ಈಶ್ವರ ಸ್ವರೂಪಮಾಗಿರ್ದ ತನ್ನಿಷ್ಟಲಿಂಗವೆ ಸದಾ
ಪ್ರಾಣವಾಗಿರುವವನು ಪ್ರಾಣಲಿಂಗಿಯು ನೋಡಾ!
ಆ ಪ್ರಾಣ ಸ್ವರೂಪವಾಗಿರ್ಪ ಲಿಂಗಕ್ಕೆ ತನ್ನನೇ ಸಂಪೂರ್ಣವಾಗಿ
ಸಮರ್ಪಿಸಿದವನು "ಶರಣ" ನೋಡಾ!
ಲಿಂಗಾಂಗ ಸಾಮರಸ್ಯ ಸುಖಸಾಮ್ರಾಜ್ಯವನೈದಿ
ಎರಡೆಂಬ ಬಗೆಯಳಿದೊಂದಾದವನು "ಐಕ್ಯ"ನು ನೋಡಾ!
ಇದುವೆ "ವೀರಶೈವಮತ"ರಹಸ್ಯವಾಗಿಪ್ಪ ಪರಮಾದ್ವೈತ
ಷಟ್‌ಸ್ಥಲ ಸಿದ್ಧಾಂತ ಪಥವೈಖರಿ ಕಾಣಾ, ಶ್ರೀ ಶೈಲಮಲ್ಲಿಕಾರ್ಜುನ!"

## ಐಕ್ಯಾನುಭಾವ [174]

'ನಾಲಗೆಯ ಹಿಡಿದು ನುಡಿಯಬಹುದೇನಯ್ಯಾ?
ಕ್ರಿಯಾ ಮರೆದು ಅನುಭವ ವೇದ್ಯವಾಗಬಹುದೇನಯ್ಯಾ?
ಕುಸುಮನುಳಿದು ಗಂಧವ ಧರಿಸಬಹುದೇನಯ್ಯಾ?
ಕ್ರಿಯಾಚರಣೆಯ ಅರುವಿನಲ್ಲಿ
ಅನುಭಾವ ಗಮ್ಯವಾಗಿಹುದು ಕಂಡಯ್ಯಾ!
ಇಂತೀ ಉಭಯುವನರಿದಡೆ ಪ್ರಾಣಲಿಂಗಯೋಗ
ಕಾಣಾ, ಶ್ರೀ ಶೈಲ ಮಲ್ಲಿಕಾರ್ಜುನ!"

## ಶಿವತತ್ತ್ವ ಚಿಂತಾಮಣಿ [175]

ಲಿಂಗತತ್ತ್ವ : "ಪರಬ್ರಹ್ಮಪರವಸ್ತುವೆನೆ ಆ ಪರಶಿವನ
ಜ್ಞಾನಚಿತ್‌ಸ್ವರೂಪಮಾದ ಲಿಂಗದಲ್ಲಿ
ಸಕಲ ಭೂತಂಗಳೆಲ್ಲ ವ್ಯುತ್ಪತ್ತಿಯಾಗಿ ಜೀವಿಸಿ
ಅಲ್ಲಿಯೇ ಲೀನವಾಗುತ್ತಿಪ್ಪುವು ನೋಡಾ!
ಯಾವ ಪರವಸ್ತುಜ್ಞಾನಚಿದ್ರೂಪ (ಶರಣನಿಂದಲಿಂಗ)ಲಿಂಗ
ಇಂತಪ್ಪ ಲಿಂಗದಿಂದ ಈ ಭೂತಂಗಳೆಲ್ಲ
ಉದ್ಭವಿಸಿದವೋ ಆ ಲಿಂಗ ತತ್ತ್ವಕ್ಕಿಂತ ಬೃಹತ್ ತತ್ತ್ವ
ಬೇರೊಂದಿಲ್ಲ ನೋಡಾ।
ಪರಶಿವನೊಳವ್ಯಕ್ತಮಾಗಿರ್ದ ಶಕ್ತಿ ಸಂಕ್ಷೋಭೆಯಿಂದ
ವ್ಯಕ್ತವಾಗಿ ಸಕಲ ಚರಾಚರ ಸೃಷ್ಟಿಯುತ್ಪತ್ತಿಯಾಯಿತ್ತು ನೋಡಾ!
ಇಂತು ವುದಿತ ಪ್ರಪಂಚವಿದೆಲ್ಲ ಪರಬ್ರಹ್ಮದಲ್ಲಿ ಲಯವಾಗುತಿರ್ಪುದು ನೋಡಾ
ಇದಕ್ಕೆ ಪ್ರಮಾಣ!
ಲೀನಂ ಪ್ರಪಂಚರೂಪಂ ಹಿ ಸರ್ವಮೇತತ್ ಚರಾಚರಂ।
ಸರ್ಗಾದೌ ಗಮ್ಯತೇಭೂಯಸ್ತಸ್ಮಾಲ್ಲಿಂಗಮುದೀರಿತಂ ॥
(ಸೂಕ್ಷ್ಮಾಗಮ ಪಟಲ-೭)



ಇಂತು ಶಿವಾಗಮಗಳೆಲ್ಲ ಆ ಪರಬ್ರಹ್ಮವನೆ ಲಿಂಗಮೆಂದು ಕರೆದಿರ್ಪುವು ನೋಡಾ
ಇಂತೀಲಿಂಗದೇವಂಗೆ ಮಿಗಿಲೆನಿಪ ದೇವನಿಲ್ಲ
ಕಾಣಾ ಶ್ರೀ ಶೈಲಮಲ್ಲಿಕಾಜುನ!

## ಸರ್ವಶೂನ್ಯ ನಿರಾಲಂಬ ಸ್ಥಲ: [176]

"ಆದಿ ಅನಾದಿ ಅಂತ್ಯಾವಸಾನವಿಲ್ಲದಂದು
ನಾದಬಿಂದು ಕಳೆಗಳಿಲ್ಲದಂದು
ಸಾವಯ ನಿರವಯವಿಲ್ಲದಂದು
ತತ್ತ್ವಬ್ರಹ್ಮಾಂಡ ಲೋಕಾದಿ ಲೋಕಂಗಳೇನೂ ಇಲ್ಲದಂದು
ನಿತ್ಯನಿರುಪಮ ನಿರಂಜನ ಪರವಸ್ತು ನೀನೊಬ್ಬನೆ ಇದ್ದೆಯಲ್ಲ!
ಶ್ರೀ ಶೈಲಮಲ್ಲಿಕಾರ್ಜುನ!'

## ಮಹಾಲಿಂಗೋದಯ: [177]

"'ಮಹಾಲಿಂಗದುದಯದ ಪರಿಯೆಂತೆಂದೊಡೆ:
ನಿರಾಕಾರ ಶಿವತತ್ತ್ವದಲ್ಲಿ ಜ್ಞಾನಚಿತ್ತುಉದಯಿಸಿತ್ತು ನೋಡಾ!
ಆ ಚಿತ್ತಿನಿಂದ ಆಕಾರ, ಉಕಾರ, ಮಕಾರಗಳೆಂಬ
ಅಕ್ಷರತ್ರಯಂಗಳಾದುವು ನೋಡಾ!
ಅಕಾರವೇ 'ನಾದ'ವೆನಿಸಿ, ಉಕಾರವೇ 'ಬಿಂದು'ವೆನಿಸಿ ಮಕಾರವೇ 'ಕಳೆಯೆನಿಸಿ
ಇಂತೀ ತ್ರಿವಿಧಕ್ಕೆ 'ಚಿತ್ತು' ಮಾತೃವೆನಿಸಿತ್ತು ನೋಡಾ!
ಇಂತಿವು ನಾಲ್ಕು ಕೂಡಿ ಒಂದಾದಲ್ಲಿ 'ಓಂಕಾರ'ವೆಂಬ ಪ್ರಣವದುತ್ಪತ್ತಿಯಾಯಿತ್ತು
ನೋಡಾ!
ಆ ಓಂಕಾರ ಪ್ರಣವವೇ ಅಖಂಡ ಪರಿಪೂರ್ಣಮಪ್ಪ
ಗೋಳಕಾಕಾರ ತೇಜೋಮೂರ್ತಿಯೆನೆ ಮಹಾಲಿಂಗ"!
ಕಾಣಾ, ಶ್ರೀಶೈಲ ಮಲ್ಲಿಕಾರ್ಜುನ!

## ಜೀವಾತ್ಮ ಸೃಷ್ಟಿ: [178]

"ದೇವಾ! ಜಗದ ಲೀಲಾ ವೈಭವಂಗಳ ನಟಿಸಬೇಕೆಂದು
ನಿಮ್ಮಲ್ಲಿ ನೆನಹುದೋರಲು ನೀವು ಸ್ವಲೀಲೆಯಿಂದ
ಸಕಲ ಬ್ರಹ್ಮಾಂಡಾದಿ ಲೋಕಂಗಳನು ರಚಿಸಿದಿರಯ್ಯಾ!
ಜೀವಾತ್ಮ ಸೃಷ್ಟಿಯುತ್ಪತ್ತಿ ಲಯಂಗಳಿಗೆಲ್ಲ
ನೀವೆ ಕಾರಣರೆನಿಸಿರ್ದಿರಯ್ಯಾ!
ಚತುರ್ದಶ ಭುವನಂಗಳೆಲ್ಲ ನಿಮ್ಮ ಕುಕ್ಷಿಯೊಳಗಿರಿಸಿಕೊಂಡು
ಮತ್ತೆ ನೀವೆಲ್ಲದರೊಳಡಗಿರ್ದು ಇಲ್ಲದಂತಿರ್ದ
ನಿಮ್ಮಪರಿ ಶರಣನೊಬ್ಬ ಬಲ್ಲ ಕಾಣಿರಯ್ಯಾ!
ಶ್ರೀ ಶೈಲಮಲ್ಲಿಕಾರ್ಜುನ!"

## ನಾವೆಂಥವರು ?

–ಎನ್. ಎಸ್. ಅಶ್ವತ್ಥಲಕ್ಷ್ಮಮ್ಮ, 322, ಹಳೆಯ ಮದ್ರಾಸ್ ರಸ್ತೆ, ಬಡಾವಣೆ
ಕೃಷ್ಣರಾಜಪುರ, ಬೆಂಗಳೂರು-560036.

ನಮ್ಮದು ಪಕ್ಷ ಬಲು ಬಲುಹ, ಬಲುಗಡಸು
ನಾವು ಜನತಾ ಸೇವಕರು ಏನೇನ ಮಾಡಲು ಸಿದ್ಧರಿಹೆವು
ಜನತೆಯ ಬೆಂಬಲ, ಎಮಗದು ಗುರುಬಲ
ಕಾಯಕವೇ ಕೈಲಾಸ, ಸೇವೆಯೇ ಶಿವಮಂತ್ರ
ಎಮ್ಮದು ಜನತಂತ್ರ, ನಮಗದು ಮೂಲಮಂತ್ರ
ಮತ್ತೆ ಹೇಳುವುದೇನು ? ಯಂತ್ರ !
ಕೊಡುವೆವು ವಚನವ ಕೈಮುಟ್ಟಿ,
ಭರವಸೆ ಮಾಲೆಗಳ ಬಲುಗಟ್ಟಿ
ಆಶ್ವಾಸನೆಗಳ ಆಧಾರ, ನೆರವಿನ ಸತ್ಕಾರ
ಫಲಗಳ ಫೂತ್ಕಾರ, ಗೆಲುವಿನ ನಮಸ್ಕಾರ
ನಮ್ಮ ಇಂದಿನ ಚುನಾವಣೆಯ ಸಾಕ್ಷಾತ್ಕಾರ
ಅರಿಸಿ ಅರಿಸಿ ಮತ ನೀಡಿ, ವಿನೀತರಾಗಿಹೆವು
ಸೇವೆಯ ಬಲ್ಮೆಗೆ, ಒಲ್ಮೆಯಲಿ ಬದ್ಧರಿಹೆವು
ನಿಮ್ಮ ಸಹಕಾರ, ಎಮಗಾಶಾಗೋಪುರ
ನಾವು, ನಾವು ಎಂಥವರು............?
ನಿಮ್ಮ ಬೆಂಬಲದ ಬೆನ್ನೇರಿ

ಸುದೀರ್ಘ ಸುರತನವನನುಭವಿಪಧೀರರು

ಅವರೆ, ಅವರೆ, ಎಮಗಾಪ್ತರು

ಎಮ್ಮ ನೀತಿ ನಿಯಮಗಳನನುಸರಿ ಪವರ್

ಇಲ್ಲವಾದರೆ ಇದ್ದೇ ಇದೆ, ಪಕ್ಷ ಬಹಿಷ್ಕಾರ

ಪಕ್ಷದ ಒಡಕು ಕೆಲವರ್ಗೆ ಕೆಡುಕು, ಹಲವರ್ಗೆ ನಡುಕು

ಹೋಗಲಿ ಬಿಡಿ, ಕಟ್ಟೋಣ ಹೊಸಪಕ್ಷ

ಎನ್ನುವರು ಕೊಂಚ ಜನ

ಒಂದು ಎರಡಾಗಿ ಎರಡು ನಾಲ್ಕಾಗಿ

ಪಣದ ಬಣವಾದ ಪಕ್ಷಗಳು

ಹೊಸ ಪಕ್ಷದ ಝೇಂಕಾರ, ಹಳೆಯದರ ಹಾಹಾಕಾರ

ಕಲ್ಲೆಸೆತ, ಉರಿಬಿಸಿತಾ, ವಾಕ್ರಸತಾ,

ಹೊಯ್‌ಕಯ್ ಮರುಕುಸಿತ

ನಾವು ಪಕ್ಷಿಗಳು! ಮಧುವನರಸುತ ಹೊರಟ ದುಂಬಿಗಳು

ಸುಗಂಧ ಸುಮಗಳ ಬೀಡಿಗೆ ಎಮ್ಮ ಪಯಣ

ನಿರ್ಗಂಧವಿದ್ದಲ್ಲಿ ನಿಸ್ತಬ್ಧರು ನಿಶ್ಯಬ್ದರು

ನಾವೆಂಥವರು ? ನಾವಿಂಥವರು !

ಗೆಲುವಿಗೆ ನಮ್ಮ ಮತ, ಒಲುಮೆಗೆ ನಮ್ಮ ಮತ

ಬಲ್ಲಿದರ ಮಾತಿನ ಜಾಡು, ಎಮ್ಮ ಗೆಲುವಿನ ಬೀಡು

ಇಲ್ಲದಿರೆ ಎಮಗೆ ಪಾಡು, ಬಿಟ್ಟರೆ, 'ಬೇಡು'



# 'ವಿಚಾರ'

ಡಾ|| ಅಹಲ್ಯ ಚಿಂತಾಮಣಿ, ಸಸ್ಯಶಾಸ್ತ್ರ ವಿಭಾಗ, ಗಾರ್ಗಿಕಾಲೇಜು, ದೆಹಲಿವಿಶ್ವವಿದ್ಯಾಲಯ,
ಪಂಚಶೀಲಮಾರ್ಗ, ಹೊಸದೆಹಲಿ.

ನಮ್ಮಕಡೆ ಮತ್ತೊಬ್ಬರು ತಿರುಗಿ ನೋಡಿದಾಗ ನಾವೂ ಒಂದುಕ್ಷಣ ಅವರ ಬಗ್ಗೆ ಚಿಂತಿಸೋಣ. ಪ್ರಾಯಶಃ ಅವರು ನಮ್ಮಿಂದ ಪ್ರೋತ್ಸಾಹ, ಅನುಕಂಪ ಅಥವಾ ಒಂದು ಸ್ನೇಹದ ಸಲಿಗೆಯನ್ನು ಆಶಿಸಬಹುದು. ಅವರು ನಮ್ಮೊಡನೆ ಸುಖದುಃಖದ ಸಂವೇದನೆಯನ್ನು ಹಂಚಿಕೊಂಡು ನೆಮ್ಮದಿ ಪಡೆಯಬಹುದು. ಅಥವಾ ನಮ್ಮ ಸನಿಹವೇ ಅವರಿಗೆ ಸಾಕಷ್ಟು ಸಮಾಧಾನಕ್ಕೆ ಕಾರಣವಾಗ ಬಹುದು.

ನಾವು ಮತ್ತೊಬ್ಬರ ಬಗ್ಗೆ ಗುರುತರವಾಗಿ ಚಿಂತಿಸಲು ನಮ್ಮ ಸಮಯದಲ್ಲಿ ಒಂದು ಕ್ಷಣವನ್ನಾದರೂ ಉಪಯೋಗಿಸಿದಲ್ಲಿ, ನಾವು ನಮ್ಮ ಸಮಯದಲ್ಲಿ ಒಂದು ಕ್ಷಣವನ್ನು ಇನ್ನೊಬ್ಬರ ಸಹಕಾರಕ್ಕೆ, ಆತ್ಮೀಯತೆಗೆ, ಮಮತೆ ವಿಶ್ವಾಸಕ್ಕೆ ಉಪಯೋಗಿಸುವಂತಾದಲ್ಲಿ, ಅವರ ಸುಖದುಃಖದಲ್ಲಿ ಸಮಭಾಗಿಯಾಗಲು ಅವಕಾಶ ಮಾಡಿಕೊಂಡಲ್ಲಿ, ಆದರಿಂದ, ಪ್ರತಿದಿನದ ಪ್ರತಿಕ್ಷಣದ ಬಾಳುವೆಯಲ್ಲಿ ಉಂಟಾಗುವ ಆತ್ಮತೃಪ್ತಿಗೆ ಎಣೆಯೇ ಇಲ್ಲ.

ನಾವು ಪ್ರತಿಕ್ಷಣವೂ ಆ ಸದಾವಕಾಶಕ್ಕೆ ಕಾತುರರಾಗಿ ಕಾಯೋಣ; ಸದುಪಯೋಗ ಪಡಿಸಿಕೊಳ್ಳೋಣ. ಆ ಕ್ಷಣವನ್ನು; ಇಪ್ಪತ್ನಾಲ್ಕು ಘಂಟೆಗಳ ಯಾಂತ್ರಿಕ ಜೀವನದಲ್ಲಿ ಕೆಲವೇ ಕ್ಷಣಗಳಾದರೂ ಮಾನವರಾಗಿ ಬಾಳೋಣ, ಆಕ್ಷಣದ ಆನಂದವನ್ನು ಅನುಭವಿಸೋಣ.

## ತುಮಕೂರು ನಗರ ಗೃಹನಿರ್ಮಾಣ ಸಹಕಾರಸಂಘ, ನಿಯಮಿತ, ಶ್ರೀ ಜಯಚಾಮರಾಜೇಂದ್ರ ರಸ್ತೆ, ತುಮಕೂರು–572101

**ದಿನಾಂಕ 31-12-92ಕ್ಕೆ ಇದ್ದಂತೆ**

| | | |
|---|---|---|
| 1 | ಷೇರು ಬಂಡವಾಳ | ರೂ. 5,24,500-00 |
| 2 | ಕಾದಿರಿಸಿದ ನಿಧಿ | ರೂ. 1,73,460-00 |
| 3 | ಹೊರಗಿನ ಸಾಲಗಳು | ರೂ. 66,30,846-00 |
| 4 | ಸದಸ್ಯರಿಗೆ ಕೊಟ್ಟ ಸಾಲಗಳು | ರೂ. 69,12,880.00 |
| 5 | ವಸತಿ ಸಾಲ ಗರಿಷ್ಠ | ರೂ. 1,50,000-00 |
| 6 | ಗೃಹ ಅಭಿವೃದ್ಧಿ ಮತ್ತು ಬಡಾವಣೆ ಸಾಲ ಗರಿಷ್ಠ | ರೂ. 50,000-00 |
| 7 | ಅವಧಿ | 20 ವರ್ಷ |
| 8 | ಬಡ್ಡಿ ದರ | 15% |

**ಆಡಳಿತ ಮಂಡಳಿ ಸದಸ್ಯರು**

1 ಶ್ರೀ ಜಿ. ಎನ್. ಮಧೂಡಯ್ಯ (ಅಧ್ಯಕ್ಷರು)
2 ಶ್ರೀ ಬಿ ಟಿ. ಕೆಂಪಣ್ಣ
3 ಶ್ರೀ ಟಿ. ಸಿ. ಗುಬ್ಬಿ ಹುಚ್ಚಪ್ಪ
4 ಶ್ರೀ ಎಂ. ಎಸ್. ಹನುಮಂತರಾವ್
5 ಶ್ರೀ ಲಕ್ಷ್ಮಯ್ಯ
6 ಶ್ರೀ ಹೆಚ್ ಆರ್. ಬಸವರಾಜು
7 ಶ್ರೀ ಎಂ. ಆರ್. ಸಿದ್ಧಲಿಂಗದೇವರು
8 ಶ್ರೀ ಟಿ. ಹೆಚ್. ಕೆಂಪಹೊನ್ನಯ್ಯ
9 ಶ್ರೀ ಬಿ. ದೊಡ್ಡಯ್ಯ
10 ಶ್ರೀ ಟಿ. ಆರ್. ಪುಟ್ಟಸ್ವಾಮಿ
11 ಶ್ರೀ ಟಿ. ಎನ್. ಜಗದೀಶ್
12 ಶ್ರೀ ಸುರೇಂದ್ರಕುಮಾರ್
13 ಶ್ರೀ ಟಿ. ಪಿ. ನಾಗರಾಜ್
14 ಶ್ರೀ ಟಿ. ಎಸ್. ಬಸಟ್ಟಪ್ಪ
15 ಶ್ರೀಮತಿ ರೀಟಾ

ಟಿ. ಆರ್. ತಿಮ್ಮಯ್ಯ, ಕಾರ್ಯದರ್ಶಿ

## ಗ್ರಾಮಾಂತರ ಬಸವಜಯಂತಿ-1993

ಬಸವಣ್ಣ ಮಹೋನ್ನತ ಸಂದೇಶವನ್ನು ಮನುಕುಲಕ್ಕೆ ನೀಡಿದ ಮಹಾನುಭಾವ. ಲೋಕಕಂಡ ಅದ್ಭುತಗಳಲ್ಲಿ ಬಸವಣ್ಣ ಒಬ್ಬ. **He is wonder of creation.** ಸಮಗ್ರ ಕ್ರಾಂತಿಯ ಮೂಲಪುರುಷ. ವಿನಯ ಆದರ್ಶಗಳ ಸಾಧಕ. ಕಾಯಕ ದಾಸೋಹಗಳ ದೇವರೂವಾರಿ. ಧರ್ಮದೀಪಕ. ದೇವರನ್ನು ಮಾನವರಲ್ಲಿ ಕಂಡ ವಿನೂತನ ವಿಜ್ಞಾನಿ. ಬಸವಣ್ಣನವರ ಸಂದೇಶವನ್ನು, ತತ್ವಗಳನ್ನು ಗ್ರಾಮೀಣ ಜನತೆಯಲ್ಲಿ ಪ್ರಚಾರಮಾಡುವ ಪವಿತ್ರ ಉದ್ದೇಶದಿಂದ ಪರಮ ಪೂಜ್ಯ ಶ್ರೀ ಶ್ರೀಗಳು 1979ರಿಂದ "ಗ್ರಾಮಾಂತರ ಬಸವಜಯಂತಿ" ಮಹಾ ಮಣಿಹವನ್ನು "ಲಿಂಗಪೂಜೆ"ಯೆಂದೇ ನಡೆಸಿಕೊಂಡು ಬರುತ್ತಿದ್ದಾರೆ. ಅದಕ್ಕಾಗಿ ನಾಟಕ ಮಾಧ್ಯಮವನ್ನು ಅನುಸರಿಸಿ "ಜಗಜ್ಯೋತಿ ಬಸವೇಶ್ವರ" ನಾಟಕವನ್ನು ಶ್ರೀಮಠದ ಅಧ್ಯಾಪಕ ಸಿಬ್ಬಂದಿ, ವಿದ್ಯಾರ್ಥಿಗಳ ಸಹಕಾರದೊಡನೆ ಪ್ರದರ್ಶಿಸುತ್ತಸಾಗಿದ್ದಾರೆ. ಎಂಬತ್ತೈದು ತುಂಬುತ್ತಿರುವ ಪೂಜ್ಯ ಶ್ರೀ ಶ್ರೀಗಳಿಗೆ ಬಸವಜಯಂತಿಯೆಂದರೆ ಎಲ್ಲಿಲ್ಲದ ಉತ್ಸಾಹ, ಭಕ್ತಿ. ಸಾವಿರಾರು ಕಾರ್ಯಗಳ ಮಧ್ಯೆಯೂ ಬಿಡುವುಮಾಡಿಕೊಂಡು ನೂರಾರು ಕಿ.ಮೀ. ಸಂಚರಿಸಿ ಹಗಲು ರಾತ್ರಿಗಳೆನ್ನದೆ ಬಸವತತ್ವ ಪ್ರಚಾರ ಸೇವೆ ಮಾಡುತ್ತಿದ್ದಾರೆ. 1993ರಲ್ಲಿ ಬಸವ ಜಯಂತಿ ಕಾರ್ಯಕ್ರಮಗಳು ಹೀಗೆ ನಡೆಯುತ್ತ ಬಂದಿವೆ.

| | |
|---|---|
| 30-1-93 | ಶ್ರೀಮಠ – 294ನೇ ಪ್ರಯೋಗ |
| 3-2-93 | ತಣ್ಣೀರುಹಳ್ಳಮಠ, ಹಾಸನ 295ನೇ |
| 19-2-93 | ಶ್ರೀಮಠ. ಶಿವರಾತ್ರಿ ಜಾಗರಣೆ ಪ್ರಯುಕ್ತ 296ನೇ |
| 23-2-93 | ಎಡೆಯೂರು. ಕಲ್ಪಶ್ರೀ ಜಿಲ್ಲಾ ಉತ್ಸವದ ಪ್ರಯುಕ್ತ 297ನೇ |
| 27-2-93 | ಸಿದ್ಧರಬೆಟ್ಟ, ಕೊರಟಗೆರೆ ತಾಲ್ಲೂಕು 298ನೇ |
| 6-3-93 | ಆವರ್ತಿ, ಪಿರಿಯಾಪಟ್ಟಣ ತಾಲ್ಲೂಕು. 299ನೇ |

ಇನ್ನೂ ಮುಂದುವರಿಯುತ್ತದೆ.

## ಶ್ರದ್ಧಾಂಜಲಿ

### ಡಾ|| ರಂ. ಶ್ರೀ. ಮುಗಳಿ

ಸಹೃದತೆಯ ಸಾಕಾರವಾಗಿ 'ರಸಿಕರಂಗ'ರಾಗಿ 'ಕನ್ನಡಸಾಹಿತ್ಯ ಚರಿತ್ರೆ'ಯ ನಿರ್ಮಾಪಕರಾಗಿ, "ಚರಿತ್ರೆಗೆ ವ್ಯಕ್ತಿತ್ವ ಮುದ್ರೆಯೊತ್ತಿದ" ಡಾ|| ರಂಗನಾಥ ಶ್ರೀನಿವಾಸ ಮುಗಳಿಯವರು ಇತ್ತೀಚೆಗೆ ನಿಧನರಾದುದನ್ನು ತಿಳಿದು "ಸಿದ್ಧಗಂಗಾ' ಅಪಾರ ದುಃಖಕ್ಕೊಳಗಾಗಿದೆ. ಹಳೆಯ ತಲೆಮಾರಿನ ವಿದ್ವಾಂಸರೆನಿಸಿಕೊಂಡಿದ್ದ ಮುಗಳಿಯವರ ನಿಧನದಿಂದ ಕನ್ನಡಸಾಹಿತ್ಯ ಲೋಕಕ್ಕೆ ಅಪಾರ ನಷ್ಟವಾಗಿದೆ. ವಿನಯ ಸೌಜನ್ಯಗಳ ಸಾಕಾರ ಮೂರ್ತಿಗಳಾಗಿದ್ದ ಡಾ|| ಮುಗಳಿಯವರು ಶ್ರೀ ಸಿದ್ಧಗಂಗಾ ಮಠದಲ್ಲಿ 1963ರಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದುದನ್ನು 'ಸಿದ್ಧಗಂಗಾ' ಸಜಲನಯನಗಳಿಂದ ಸ್ಮರಿಸುತ್ತದೆ. ದಿವಂಗತ ಡಾ|| ಮುಗಳಿಯವರ ಆತ್ಮಕ್ಕೆ ಪರಮಾತ್ಮನು ಚಿರಶಾಂತಿಯನ್ನು ಕರುಣಿಸಲೆಂದು ಪ್ರಾರ್ಥಿಸುತ್ತದೆ. ಬಂಧು ಬಾಂಧವರಿಗೆ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ದಯಾಮಯನಾದ ಪರಶಿವನು, ಶ್ರೀ ಸಿದ್ಧಗಂಗಾ ಶ್ರೀ ಗುರು ನೀಡಲೆಂದು ಬೇಡುತ್ತದೆ.

---

# ಕ್ಷೇತ್ರವಾರ್ತೆ

–ಹೆಚ್. ಬಿ. ಗಂಗಾಧರಯ್ಯ

ಶ್ರೀ ಸಿದ್ಧಗಂಗಾ ಮಠದಲ್ಲಿ ಪೂಜ್ಯ ಉದ್ದಾನ ಸ್ವಾಮಿಗಳವರ 52ನೇ ಪುಣ್ಯಾರಾಧನೆ. ಗ್ರಾಮಾಂತರ ಬಸವಜಯಂತಿ ವಾರ್ಷಿಕ ಸಮಾರೋಪ ಸಮಾರಂಭ ಮತ್ತು ಕರ್ನಾಟಕ ವೀರಶೈವ ಅರಸು ಮನೆತನಗಳ ಅಧ್ಯಯನದ ಅಂಗವಾಗಿ ಹಾಗಲವಾಡಿ ಅರಸು ಮನೆತನದ ವಿಚಾರ ಸಂಕಿರಣಗಳ ಸಮಾರಂಭಗಳು 14-15 ಜನವರಿ ನಡೆದವು. ಪೂಜ್ಯ ಶ್ರೀ ಶ್ರೀ ಶಿವಕುಮಾರಸ್ವಾಮಿಗಳು ಎಲ್ಲಾ ಸಮಾರಂಭಗಳ ನೇತೃತ್ವ ವಹಿಸಿದ್ದರು.

ಬಸವಣ್ಣ ಕೇವಲ ಧಾರ್ಮಿಕ, ಸಾಮಾಜಿಕ, ಆರ್ಥಿಕ, ಸಾಹಿತ್ಯಕ ಹಾಗೂ ಆಧ್ಯಾತ್ಮಿಕ ಪುರುಷನಷ್ಟೇ ಆಗಿರಲಿಲ್ಲ, ರಾಜಕೀಯ ಮಹಾ ನಾಯಕನೂ ಆಗಿದ್ದನು. ಕರ್ನಾಟಕದ ವೀರಶೈವ ಅರಸು ಪರಂಪರೆ ಬಸವಣ್ಣ ಪ್ರೇರಕ ಎಂಬುದಾಗಿ ಕರ್ನಾಟಕ ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾದ ಡಾ|| ಎಂ.ಎಂ. ಕಲ್ಬುರ್ಗಿಯವರು ಗೋಷ್ಠಿಯ ಅಧ್ಯಕ್ಷತೆಯನ್ನು ವಹಿಸಿ ಮಾತನಾಡಿ. ಮತ್ತೊಂದು ಗೋಷ್ಠಿಯಲ್ಲಿ ಮಾತನಾಡುತ್ತಾ, ಬಸವಣ್ಣ ಕರ್ಮದಿಂದ ಧರ್ಮಕ್ಕೆ ಅಂಗದಿಂದ ಲಿಂಗಕ್ಕೆ ಲಿಂಗದಿಂದ ಜಂಗಮಕ್ಕೆ ನಡೆದ ಪ್ರಜಾಪ್ರಭುತ್ವವಾದಿ ಮಾನವತೆಯ ಮಹಾ ಪುರುಷ ಎಂದು ವಿಶ್ಲೇಷಿಸಿದರು.

ಮೈಸೂರು ವಿಶ್ವವಿದ್ಯಾನಿಲಯದ ಇತಿಹಾಸ ವಿಭಾಗದ ಪ್ರಾಧ್ಯಾಪಕರಾದ ಡಾ|| ಕೆ. ಎಸ್. ಶಿವಣ್ಣನವರು ಅಧ್ಯಕ್ಷ ಸ್ಥಾನದಿಂದ ಮಾತನಾಡುತ್ತಾ, ಕರ್ನಾಟಕ ನಾಲ್ಕು ಸಂಸ್ಕೃತಿಯನ್ನು ಕಂಡ ಪುಣ್ಯವಂತ ನಾಡು, ವೈದಿಕ, ಶ್ರವಣ, ಶರಣ ಮತ್ತು ಜನಪದ ಸಂಸ್ಕೃತಿಗಳ ಆಡುಂಬೊಲ ಎನ್ನುತ್ತಾ ಶರಣ ಸಂಸ್ಕೃತಿ ಕರ್ನಾಟಕ ನೈಜ ಸಂಸ್ಕೃತಿಯ, ಇತಿಹಾಸವನ್ನು ಬರೆಯಿತು ಎಂದರು. ಕರ್ನಾಟಕದ ಇತಿಹಾಸ ವೆಂದರೆ ಕೇವಲ ವಿಜಯನಗರ ಅಥವಾ ಗಂಗರ, ಚಾಲುಕ್ಯರ ಇತಿಹಾಸವಷ್ಟೆ ಅಲ್ಲ, ಹಾಗಲವಾಡಿಯ ಅರಸರಂಥವರು ಕರ್ನಾಟಕ ಸಂಸ್ಕೃತಿಯನ್ನು ಬೆಳೆಸಿದವರು ಎಂದು ನುಡಿದರು.

ಮತ್ತೊಂದು ಗೋಷ್ಠಿಯ ಅಧ್ಯಕ್ಷತೆಯನ್ನು ವಹಿಸಿದ್ದ ಗುಲ್ಬರ್ಗ ವಿಶ್ವವಿದ್ಯಾನಿಲಯದ ಡಾ|| ಎಸ್. ಆರ್. ಗುಂಜಾಳ ಅವರು ಬಸವಾದಿ ಶರಣರ ಬಗ್ಗೆ ಅಪಾರ ಸಾಹಿತ್ಯದ ಪರಿಚಯ ಮಾಡಿಕೊಟ್ಟರು. ಪಾಶ್ಚಾತ್ಯ ವಿದ್ವಾಂಸರು ವೀರಶೈವ ಸಾಹಿತ್ಯವನ್ನು ಕುರಿತು ಹೇಳಿರುವ ಹೇಳಿಕೆಯನ್ನು ಉಲ್ಲೇಖಿಸಿದರು.

ಬೆಂಗಳೂರು ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರಾದ ಡಾ|| ಎಸ್. ವಿದ್ಯಾಶಂಕರರವರು ಶಿವಯೋಗಿ ಉದ್ಧಾನ ಸ್ವಾಮಿಗಳು ದಾರ್ಶನಿಕರು, ಶ್ರೀ ಸಿದ್ಧಗಂಗಾಮಠದ ಕಾರಣ ಪುರುಷರು, ಪೂಜ್ಯ ಶ್ರೀ ಶಿವಕುಮಾರ ಸ್ವಾಮಿಗಳಂತಹ ಮಹಾಪುರುಷರನ್ನು ಸಮಾಜಕ್ಕೆ ಕೊಟ್ಟು ಹೋದ ಪುಣ್ಯಮೂರ್ತಿಗಳು ಎಂಬುದಾಗಿ ಗುಣಗಾನ ಮಾಡಿದರು.

ಹಾಗಲವಾಡಿ ಅರಸು ಮನೆತನ ವಿಚಾರ ಸಂಕೀರಣದಲ್ಲಿ ಶ್ರೀ ಡಿ. ವಿ. ಪರಶಿವಮೂರ್ತಿ ಶ್ರೀ ಕೆ. ಬಿ. ಶಿವತಾರಕ, ಶ್ರೀ ನಿರ್ಮಲರಾಜು, ಶ್ರೀ ದೇವರಕೊಂಡಾರೆಡ್ಡಿ, ಡಾ|| ನಂಜುಂಡಸ್ವಾಮಿ, ಡಾ|| ವೀರಣ್ಣರಾಜೂರು, ಡಾ|| ಬಿ. ಆರ್. ಹಿರೇಮಠ ಅವರುಗಳು ಪ್ರಬಂಧ ಮಂಡಿಸಿದರು.

ಎಲ್ಲಾ ಸಮಾರಂಭಗಳನ್ನು ಉದ್ಘಾಟಿಸಿ ಆಶೀರ್ವಚನ ನೀಡಿದ ಬೆಂಗಳೂರಿನ ಸರ್ಪಭೂಷಣ ಮಠದ ಪೂಜ್ಯ ಶ್ರೀ ಮಲ್ಲಿಕಾರ್ಜುನಸ್ವಾಮಿಗಳು, ಶ್ರೀ ಸಿದ್ಧಗಂಗಾಮಠದ ಸೇವಾ ಕೈಂಕರ್ಯವನ್ನು ಪ್ರಶಂಸಿಸುತ್ತಾ, ಪೂಜ್ಯ ಸ್ವಾಮೀಜಿಯವರ ಕರ್ತೃತ್ವ ಶಕ್ತಿಯನ್ನು ಕೊಂಡಾಡಿದರು. ಪೂಜ್ಯ ಉದ್ಧಾನ ಶಿವಯೋಗಿಗಳು ಎಲ್ಲರಿಗೆ ಮೇಲ್ಪಂಕ್ತಿಯಾಗಿ ಬೆಳಗಿದ್ದಾರೆ ಎಂದರು. ಸಮಾರಂಭದಲ್ಲಿ ಶ್ರೀ ಮಠದ ಕಿರಿಯ ಸ್ವಾಮಿಗಳಾದ ಪೂಜ್ಯ ಶ್ರೀ ಸಿದ್ದಲಿಂಗಸ್ವಾಮಿಗಳು ಗುರುಸೇವೆಗಿಂತ ಪರಮಭಾಗ್ಯ ಮತ್ತೊಂದಿಲ್ಲ ಎಂದು ವಚನಗಳ ಮತ್ತು ಸ್ವರವಚನಗಳ ಉದಾಹರಣೆಗಳೊಂದಿಗೆ ವಿವರಿಸಿದರು.

ಸಮಾರಂಭಗಳ ನೇತೃತ್ವ ವಹಿಸಿದ್ದ ಪರಮ ಪೂಜ್ಯ ಶ್ರೀ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು, ನಮ್ಮ ಗುರುಗಳದು ಅದ್ಭುತವಾದ ವ್ಯಕ್ತಿತ್ವ. ಅವರು ಸದಾ ಕ್ರಿಯಾಶೀಲರಾಗಿ ಮಾರ್ಗದರ್ಶನ ಮಾಡಿದ ಮಹಾನುಭಾವರು. ದೀನದಲಿತರ ಬಗ್ಗೆ ಅನುಕಂಪಯಿದ್ದ ಮಹಾನುಭಾವರು ಎಂದು ನುಡಿದರು. ಬಸವಣ್ಣನವರನ್ನು ಕುರಿತು ಆಶೀರ್ವಚನ ನೀಡುತ್ತಾ, ಜಗತ್ತು ಕಂಡ ಮಹೋನ್ನತ ವಿಸ್ಮಯ, ಬಸವಣ್ಣನವರ ಅವತಾರ. ಸಮಗ್ರ ಕ್ರಾಂತಿಯ ಮೂಲ ಪುರುಷ, ಸಮಾಜವನ್ನು ಜಂಗಮವೆಂದು ನಂಬಿ ನಡೆದ ಆಧ್ಯಾತ್ಮದಜ್ಞಾನಿ. ಭರತಖಂಡದ ಮೊಟ್ಟಮೊದಲನೆಯ ಸ್ವತಂತ್ರ ವಿಚಾರ ಪುರುಷ, ವಾಸ್ತವಕ್ಕೆ ಬೆಲೆಕೊಟ್ಟ ಚಿಂತನ ಶೀಲ. ಮಾನವೀಯತೆಯ ಮೂಲ ಪುರುಷ ಎಂಬುದಾಗಿ ಆಶೀರ್ವದಿಸಿದರು.

ಸಮಾರಂಭದ ಅಂಗವಾಗಿ ವಚನಗಾಯನ ಏರ್ಪಡಿಸಲಾಗಿತ್ತು, ಜೊತೆಗೆ "ಲೋಕದ ಡೊಂಕು" ಎಂಬ ನಾಟಕವನ್ನು ಅಭಿನಯಿಸಲಾಯಿತು. ಸುಮಾರು ನಾಲ್ಕು ಸಾವಿರ ಭಕ್ತಾದಿಗಳು ಸಮಾರಂಭದಲ್ಲಿ ಭಾಗಿಗಳಾಗಿದ್ದರು.

## ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನ ಪ್ರಾರಂಭ.

ಶ್ರೀ ಸಿದ್ಧಲಿಂಗೇಶ್ವರಸ್ವಾಮಿಯ ಜಾತ್ರೆಯ ಅಂಗವಾಗಿ ಏರ್ಪಡಿಸಿದ್ದ ರಾಜ್ಯಮಟ್ಟದ ವಸ್ತು ಪ್ರದರ್ಶನವನ್ನು 8-2-93 ರಾಜ್ಯ ಸಾರಿಗೆ ಸಚಿವ ಶ್ರೀ ಭೀಮಣ್ಣಖಂಡ್ರೆ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಮಾತನಾಡುತ್ತ ಪೂಜ್ಯ ಶ್ರೀ ಶ್ರೀಗಳ ನಡೆ-ನುಡಿ, ತತ್ವ ಹಾಗೂ ವಿಚಾರಗಳಲ್ಲಿ ರಾಜ್ಯದ 4½ ಕೋಟಿ ಜನರಿಗೆ ಆದರ್ಶವಾದಿಗಳಾಗಿ ಮಾದರಿಯಾಗಿದ್ದಾರೆ. ಇವರು 20ನೇ ಶತಮಾನದ ಬಸವಣ್ಣನ ಅವತಾರವೆನ್ನಬಹುದು. ಭೂಲೋಕದಲ್ಲೇ ಸ್ವರ್ಗದಂತಿರುವ ಇಲ್ಲಿ ನಡೆಯುತ್ತಿರುವ ಕಾರ್ಯಕಲಾಪಗಳು ಅನುಭವ ಮಂಟಪದಂತೆಯೇ ಇವೆ ಎಂದರು. ನಮ್ಮ ಸಂವಿಧಾನದಲ್ಲಿ ಬಸವತತ್ವವು ಅಂಶಿಕವಾಗಿರುವುದರಿಂದಲೇ ದೇಶವಿನ್ನು ಸ್ವಲ್ಪಮಟ್ಟಿಗೆ ಸುಭಿಕ್ಷವಾಗಿದೆ ಎಂದರು.

ದೇಶದಲ್ಲಿ ಬೆಳೆಯುತ್ತಿರುವ ಜನಸಂಖ್ಯೆಗೆ ಅನುಗುಣವಾಗಿ ಆಹಾರದ ಉತ್ಪಾದನೆ ಮತ್ತು ನಾಗರಿಕ ಸೌಲಭ್ಯಗಳನ್ನು ಬೆಳೆಸಿಕೊಳ್ಳಲು ವಿಜ್ಞಾನದ ಉಪಯೋಗವನ್ನು ಪಡೆಯಬೇಕೆಂದು ಆಶೀರ್ವಚನ ನೀಡಿದ ಪೂಜ್ಯ ಶ್ರೀ ಶ್ರೀಗಳವರು ಹೇಳಿದರು. ರಾಷ್ಟ್ರ ಪ್ರಗತಿಯಾಗಬೇಕಾದರೆ ಜನತೆ ಕ್ರಿಯಾ ಶೀಲರಾಗಬೇಕು. ಪ್ರತಿಯೊಬ್ಬರೂ ಸ್ಫೂರ್ತಿ ಮತ್ತು ಉತ್ಸಾಹದಿಂದ ರಾಷ್ಟ್ರಪ್ರೇಮವನ್ನು ಬೆಳೆಸಿಕೊಳ್ಳಬೇಕೆಂದರು. ನಿರಂತರವಾಗಿ ನಡೆಯುತ್ತಿರುವ ವಸ್ತುಪ್ರದರ್ಶನಕ್ಕೆ ಸರ್ಕಾರ ಶಾಶ್ವತ ಹಣದ ಸೌಲಭ್ಯವನ್ನು ನೀಡಬೇಕೆಂದು ವಿಧಾನಪರಿಷತ್ ಸದಸ್ಯ ಶ್ರೀ ಟಿ ಹೆಚ್. ನಾರಾಯಣಸ್ವಾಮಿ ತಿಳಿಸಿದರು. ಸ್ಥಳೀಯ ಶಾಸಕರಾದ ಶ್ರೀ ಷಫಿಅಹಮದ್ ಸಮಾರಂಭದ ಅಧ್ಯಕ್ಷತೆ ವಹಿಸಿ ಮಾತನಾಡಿದರು.

## ವಸ್ತು ಪ್ರದರ್ಶಡ ಮುಕ್ತಾಯ ಸಮಾರಂಭ

ರಾಜ್ಯದ ಲೋಕೋಪಯೋಗಿ ಸಚಿವ ಶ್ರೀ ಕೆ. ಹೆಚ್. ರಂಗನಾಥ್ ಸಮಾರೋಪ ಭಾಷಣ ಮಾಡುತ್ತಾ (23-2-93) ಈ ವಸ್ತುಪ್ರದರ್ಶನ ರೈತರಿಗೆ ಪರೋಕ್ಷವಾಗಿ ತುಂಬಾ ಮಾರ್ಗದರ್ಶನವಾಗಿದೆ. ವಿದ್ಯಾಪ್ರಸಾರ ಕಾರ್ಯದಲ್ಲಿ ಶ್ರೀ ಶ್ರೀಗಳವರ ಸಾಧಿಸಿರುವ ಮಹತ್ಸಾಧನೆಯಲ್ಲಿ ವಸ್ತುಪ್ರದರ್ಶನ ಅನೌಪಚಾರಿಕ ಶಿಕ್ಷಣ ಮಾಧ್ಯಮವಾಗಿದೆ ವಸ್ತುಪ್ರದರ್ಶನಕ್ಕೆ ಮುಂದಿನ ಬಜೆಟ್‌ನಲ್ಲಿ ಹಣ ಮೀಸಲಿಡಲು ಮುಖ್ಯಮಂತ್ರಿಗಳಿಗೆ ಸೂಚಿಸುವುದಾಗಿ ತಿಳಿಸಿದರು. ಶ್ರೀಮಠದಲ್ಲಿ ನಡೆಯುತ್ತಿರುವ ಬಹುಮುಖ ಕಾರ್ಯಚಟುವಟಿಕೆಗಳನ್ನು ಇತರೆಎಲ್ಲಾ ಕಡೆ ಅನುಕರಣೆ ಮಾಡುವಂತಾಗಲಿ ಎಂದು ಹಾರೈಸುತ್ತೇನೆ ಎಂದು ಹೇಳಿದರು.

ಯೋಜನೆ ಮತ್ತು ಸಾಂಖ್ಯಿಕ ಹಣಕಾಸುಖಾತೆ ರಾಜ್ಯಸಚಿವ ಶ್ರೀ ಟಿ. ಎಂ. ಮಂಜುನಾಥ್ ಉತ್ತಮ ಮಳಿಗೆಗಳಿಗೆ ಪ್ರಶಸ್ತಿ ವಿತರಿಸಿದರು. ಕೃಷಿ ಇಲಾಖೆ, ಅರಣ್ಯ ಇಲಾಖೆ, ಹೆಚ್.ಎಂ.ಟಿ. ಮತ್ತು ಸಿದ್ಧಗಂಗಾ ಅಂಧ ಮಕ್ಕಳ ಶಾಲೆ ಪ್ರಥಮ ಪ್ರಶಸ್ತಿಗಳಿಸಿದವು.

ಮನುಕುಲದ ಉದ್ಧಾರಕ್ಕೆ ಪೂಜ್ಯ ಶ್ರೀ ಶ್ರೀಗಳವರು ಶ್ರಮಿಸುತ್ತಿದ್ದಾರೆ. ರೈತರಿಗಾಗಿ ಜಾತ್ರೆಯಲ್ಲಿ ಕೃಷಿ ವಸ್ತುಪ್ರದರ್ಶನ ಶ್ರೀ ಶ್ರೀಗಳು ಏರ್ಪಡಿಸಿರುವುದು ಶ್ಲಾಘನೀಯ ಎಂದು ನುಡಿದರು.

ತುಮಕೂರು ಜಿಲ್ಲಾಪರಿಷತ್ ಕಾರ್ಯದರ್ಶಿ ಶ್ರೀಮತಿ ಅಮಿತಾಪ್ರಸಾದ್ ಈ ವಸ್ತುಪ್ರದರ್ಶನ ಬೋಧಪ್ರದವಾಗಿ ಮಾರ್ಗದರ್ಶನ ಮಾಡುವಂತೆ ಸಜ್ಜುಗೊಳಿಸಬೇಕೆಂದು ವಿವಿಧ ಇಲಾಖಾಧಿಕಾರಿಗಳಿಗೆ ಸೂಚಿಸಿದರು. ಜಿಲ್ಲಾ ಪರಿಷತ್ ಮುಂದಿನ ವರ್ಷಗಳಲ್ಲಿ ವಸ್ತುಪ್ರದರ್ಶನ ವ್ಯವಸ್ಥೆ ಮತ್ತು ಯಶಸ್ಸಿಗಾಗಿ ಹೆಚ್ಚಿನ ನೆರವು ನೀಡುತ್ತದೆ ಎಂಬ ಆಶ್ವಾಸನೆ ವ್ಯಕ್ತಪಡಿಸಿದರು ಮುಖ್ಯ ಅತಿಥಿಗಳಾಗಿ ಶಾಸಕ ಶ್ರೀ ಷಫಿಅಹಮದ್, ವಿಧಾನಪರಿಷತ್ ಸದಸ್ಯ ಶ್ರೀ ಟಿ. ಹೆಚ್. ನಾರಾಯಣಸ್ವಾಮಿ ಆಗಮಿಸಿದ್ದರು.

ಎಚ್. ಬಿ. ಗಂಗಾಧರಯ್ಯ ಸ್ವಾಗತಿಸಿದರು. ಎಂ. ರೇಣುಕಾರಾಧ್ಯ ವರದಿ ಓದಿದರು. ಎಸ್. ಚಂದ್ರಶೇಖರಯ್ಯ ಕಾರ್ಯಕ್ರಮ ನಿರೂಪಿಸಿದರು. ಎಸ್. ಶಿವಕುಮಾರ್ ವಂದಿಸಿದರು.

## 38ನೇ ಸರ್ವಸದಸ್ಯರ ಮಹಾಧಿವೇಶನ ಹಳೆಯ ವಿದ್ಯಾರ್ಥಿಗಳ ಸಂಘ.

14-3-93 ಭಾನುವಾರ ಶ್ರೀಮಠದ ಹಳೆಯ ವಿದ್ಯಾರ್ಥಿ ಸಂಘದ 38ನೇ ಸರ್ವಸದಸ್ಯರ ಸಭೆ ಶ್ರೀ ಶ್ರೀ ಉದ್ದಾನ ಶಿವಯೋಗಿ ಸ್ವಾಮಿಗಳವರ ಗದ್ದುಗೆಯ ಆವರಣದಲ್ಲಿ ಸಮಾವೇಶಗೊಂಡಿತ್ತು. ರಾಜ್ಯದ ನಾನಾ ಭಾಗಗಳಿಂದ ವಿವಿಧ ಕ್ಷೇತ್ರಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಹಸ್ರಾರು ಹಳೆಯ ವಿದ್ಯಾರ್ಥಿಗಳು ಆಗಮಿಸಿದ್ದರು.

ಹ. ವಿ. ಸಂ ವ್ಯಾಪ್ತಿಗೆ ಸೇರಿದ ವಿಭಾಗಗಳ ವಾರ್ಷಿಕ ಜಮಾಖರ್ಚಿನ ವಿವರಗಳನ್ನು ಸಭೆಯಲ್ಲಿ ಆಯಾ ಕಾರ್ಯದರ್ಶಿಗಳು ಮಂಡಿಸಿದರು.

1. ಹ. ವಿ. ಸಂ. ಕಾರ್ಯದರ್ಶಿ ಶ್ರೀ ಕೆ. ಹೆಚ್. ಶಿವರುದ್ರಯ್ಯ ಸಂಘ, ವಜ್ರ-ಮಹೋತ್ಸವ ನಿಧಿ.
2. ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನದ ಕಾರ್ಯದರ್ಶಿ ಶ್ರೀ ಬಿ. ಗಂಗಾಧರಯ್ಯ
3. ಸಿದ್ಧಗಂಗಾ ಮಾಸ ಪತ್ರಿಕೆ ಪ್ರಕಾಶಕ ಶ್ರೀ ಹೆಚ್. ಬಿ. ಗಂಗಾಧರಯ್ಯ, ಓದಿ ಸಭೆ ಅನುಮತಿ ನೀಡಿತು.

ಪೂಜ್ಯ ಶ್ರೀ ಶ್ರೀಗಳವರ ವಜ್ರಮಹೋತ್ಸವ ನಿಧಿ ಸಮಿತಿ ಕಾರ್ಯಾಧ್ಯಕ್ಷ ಶ್ರೀ ಬಿ ಎಸ್. ಮುದ್ದಪ್ಪನವರು ಮಾತನಾಡಿ ಉತ್ತಮ ಸೌಕರ್ಯಗಳನ್ನು ಒದಗಿಸುವ ಹಿತದೃಷ್ಟಿಯಿಂದ ವಜ್ರಮಹೋತ್ಸವಕ್ಕೆ ಒಪ್ಪಿಗೆ ನೀಡಿದ್ದಾರೆ. ಸುಮಾರು 75/- ಲಕ್ಷರೂಗಳು ಸಂಗ್ರಹವಾಗಿವೆ. ಆದರೆ ಅಗತ್ಯವಿರುವುದು 4 ಕೋಟಿ ರೂಗಳು ಶ್ರೀ ಶ್ರೀಗಳವರ ದೈವೀ ವ್ಯಕ್ತಿತ್ವ ಮತ್ತು ಮಹತ್ಸಾಧನೆಯ ಫಲವಾಗಿ ಜನತೆ ಉದಾರವಾಗಿ ನಿಧಿಗೆ ಸಂದಾಯ ಮಾಡುತ್ತಾರೆ. ಈ ದಿಶೆಯಲ್ಲಿ ಸಕ್ರಿಯವಾಗಿ ಹಳೆಯ ವಿದ್ಯಾರ್ಥಿಗಳು ಸಂಪೂರ್ಣ ಸಹಕಾರ ನೀಡಬೇಕೆಂದು ಮನವಿ ಮಾಡಿದರು.

ಕಾರ್ಯದರ್ಶಿಗಳಾದ ಶ್ರೀ ಹಸಬಿಯವರು ಮಾತನಾಡಿ ಈ ನಿಧಿಗಾಗಿ ಸಂಗ್ರಹಿಸುವ ಹಣ ಸತ್ಪಾತ್ರಕ್ಕೆ ಸಲ್ಲುತದೆ. ಆದಕ್ಕಾಗಿ ಜನತೆ ಕೊಡುವವರಿದ್ದಾರೆ. ಅವರ ಸಂಪರ್ಕ ಬೆಳೆಸಿ ಮನವಿ ಸಲ್ಲಿಸಿದರೆ ಉತ್ತಮವಾದ ಪ್ರತಿಕ್ರಿಯೆ ದೊರೆಯುವುದು ಎಂದು ಸೂಚಿಸಿದರು.

ಕಿರಿಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು ಹಳೆಯ ವಿದ್ಯಾರ್ಥಿ ಸಂಘ ಶ್ರೀಮಠದ ಅವಿಭಾಜ್ಯ ಅಂಗ ಎಂದು ಘೋಷಿಸಿದರು. ಇದರಿಂದ ರಚನಾತ್ಮಕ ಕಾರ್ಯ ಚಟುವಟಿಕೆಗಳು ನಡೆಯುತ್ತಿವೆ. ಯೋಜನೆಗಳು ಯಶಸ್ವಿಯಾಗಲು ಎಲ್ಲರೂ ಕಾರ್ಯ ಪ್ರವೃತ್ತರಾಗಬೇಕು ಎಂದು ಎಚ್ಚರಿಸಿದರು.

ಕ.ವಿ.ಸಂ. ಪ್ರಧಾನ ಕಾರ್ಯದರ್ಶಿ ಮತ್ತು ಸಿದ್ಧಗಂಗಾ ತಾಂತ್ರಿಕ ಕಾಲೇಜು ಪ್ರಿನ್ಸಿಪಾಲ್ ಶ್ರೀ ಎಂ.ಎನ್. ಚನ್ನಬಸಪ್ಪ ಶ್ರೀ ಮಠದ ಸಮಗ್ರ ಚಟುವಟಿಕೆಗಳು ದೂರದರ್ಶನದಲ್ಲಿ ಮೂಡಿಬರುವಂತೆ ಶೀಘ್ರವಾಗಿ ವ್ಯವಸ್ಥೆ ಮಾಡುವುದು ಉತ್ತಮವೆಂದು ಸಲಹೆ ಇತ್ತರು. ಇದರ ಮಾಧ್ಯಮದ ಮೂಲಕ ಜನತೆ ವಿವರವಾಗಿ ಶ್ರೀ ಮಠದ ಚಟುವಟಿಕೆಗಳನ್ನು ತಿಳಿಯುತ್ತಾರೆ. ವಜ್ರ ಮಹೋತ್ಸವ ನಿಧಿ ಸಂಗ್ರಹಣೆಗೆ ಇದರ ಪ್ರಭಾವದಿಂದ ತುಂಬಾ ಅನುಕೂಲವಾಗುತ್ತದೆಂದು ಹೇಳಿದರು.

ಸರ್ವಸದಸ್ಯರ ಸಭೆಯ ಅಧ್ಯಕ್ಷತೆ ವಹಿಸಿದ್ದ ಡಾ|| ಪೂಜ್ಯ ಶ್ರೀ ಶ್ರೀಗಳು ಆಶೀರ್ವಚನ ನೀಡುತ್ತಾ ಶ್ರೀ ಮಠ ಸಣ್ಣ ಪ್ರಮಾಣದಿಂದ ಬೆಳೆದು ಬಂದಿತು. ಈಗ ವಿದ್ಯಾರ್ಥಿಗಳ ಸಂಖ್ಯೆ ಬೆಳೆದಿದೆ. ಅಗತ್ಯವಾದ ಸೌಕರ್ಯಗಳನ್ನು ಕೊಡಲಾಗಿಲ್ಲ. ವಸತಿ/ಪ್ರಸಾದ ನಿಲಯ/ ನೀರು ಮತ್ತು ಸ್ವಚ್ಛತೆ ವ್ಯವಸ್ಥೆ ಮಾಡುವುದು ಮುಖ್ಯವಾಗಿದೆ. ಇವುಗಳ ಪೂರೈಕೆಗಾಗಿ ವಜ್ರಮಹೋತ್ಸವಕ್ಕೆ ಒಪ್ಪಿಗೆ ನೀಡಬೇಕಾಗಿ ಬಂತು.

ಯೋಜನೆಗಳ ಯಶಸ್ಸಿಗಾಗಿ ಶ್ರೀ ಮುದ್ದಪ್ಪ ಮತ್ತು ಶ್ರೀ ಹಸಬಿಯವರು ಪ್ರಾಮಾಣಿಕ ವ್ಯಕ್ತಿಗಳಾಗಿ ನಿಷ್ಠೆಯಿಂದ ಕೆಲಸಮಾಡುತ್ತಿದ್ದಾರೆ. ಇವರು ಸ್ಫೂರ್ತಿಯಿಂದ ಕೆಲಸ ಮಾಡಲು ಎಲ್ಲರೂ ಅವರಿಗೆ ನೆರವಾಗಬೇಕು. ಎಂದು ಸೂಚಿಸಿದರು.

ನಿಜಾಂಶವನ್ನು ಜನತೆಗೆ ತಿಳಿಸುವುದೇ ಶ್ರೀ ಮಠಕ್ಕೆ ಸಲ್ಲಿಸುವ ಯೋಗ್ಯಸೇವೆ, 5000 ಮಂದಿ ಆಶ್ರಯ ಹೊಂದಿದ್ದಾರೆ ಎಂಬುದನ್ನು ಅನೇಕರು ನಂಬುವುದಿಲ್ಲ. ಸತ್ಯವಾದ ಸಂಗತಿಗಳನ್ನು ಜನತೆಗೆ ತಿಳಿಸಬೇಕು. ಒಳ್ಳೆ ಯೋಜನೆಗಳನ್ನು ರೂಪಿಸಿದ್ದಾರೆ. ಸ್ಮಾರಕವಾಗಿ ಶತಮಾನಗಳ ಕಾಲ ಉಳಿಯುತ್ತವೆ. ಎಲ್ಲ ಹಳೆಯ ವಿದ್ಯಾರ್ಥಿಗಳು ಹೆಚ್ಚು ಆಸಕ್ತಿವಹಿಸಿ ಕೆಲಸ ಮಾಡಬೇಕು. ಎಂದು ಆಜ್ಞಾಪಿಸಿದರು.

ಶ್ರೀ ಮಠದ ಪವಿತ್ರ ಪರಂಪರೆಗೆ ಭಂಗ ಬರದಂತೆ ಶ್ರೀತ್ವ ಉಳಿದು ಬೆಳೆದು ಬರಬೇಕೆಂದು ಆಶಿಸಿದರು.

ಸಂಪ್ರದಾಯದಂತೆ ನಡೆದು ಬಂದ ಅಂದಿನ 'ಅದೃಷ್ಟವಂತ' ಶ್ರೀ ಶ್ರೀಗಳು ಭಾವಚಿತ್ರ ಪಡೆದವರು ಗಣೇಶ ಪ್ರೌಢಶಾಲೆ, ಗುಳೂರು ಶಿಕ್ಷಕರಾದ ಶ್ರೀ ಹೆಚ್. ಡಿ. ಶಿವಣ್ಣ.

ಪ್ರಾರಂಭದಲ್ಲಿ ಸಂಘದ ಪ್ರಧಾನ ಕಾರ್ಯದರ್ಶಿ ಶ್ರೀ ಎಂ.ಎನ್. ಚನ್ನಬಸಪ್ಪ ಸ್ವಾಗತಿಸಿದರು. ಶ್ರೀ ಕೆ. ಹೆಚ್. ಶಿವರುದ್ರಯ್ಯ ವರದಿ ಓದಿದರು. ಶ್ರೀ ಕೆ. ವೀರಭದ್ರಯ್ಯ ವಂದಿಸಿದರು.

## ಶಾಂತಿ, ಪ್ರೇಮ, ಸಹನೆ-ಸಹಬಾಳ್ವೆ ಇದು ನಮ್ಮ ಮತವಾಗಲಿ

ದ್ವೇಷವನ್ನು ವಿರೋಧಿಸಿ, ಮತೀಯ ಅಂಧಾಭಿಮಾನವನ್ನು ದೂರಮಾಡಿ, ಮತಭ್ರಾಂತಿಯನ್ನು ತಿರಸ್ಕರಿಸಿ ನಮ್ಮ ರಾಷ್ಟ್ರದ ಸುಂದ ಜಾತ್ಯಾತೀತ ಹಂದರವನ್ನು ವಿಚ್ಛಿದ್ರಕಾರಕ ಶಕ್ತಿಗಳು ಹಾಳು ಮಾಡಲು ಎಡೆಗೊಡಬೇಡಿ.

ಭಾರತದ ಒಗ್ಗಟ್ಟು ಹಾಳಾದರೆ, ರಾಷ್ಟ್ರಶಕ್ತಿ ಕುಂದುತ್ತದೆ. ಭಾರತ ಅಶಕ್ತವಾಗಲು ನಾವೆಂದಿಗೂ ಅವಕಾಶ ನೀಡಬಾರದು.

ಶತ ಶತಮಾನಗಳಿಂದ ಭಾರತ ಪವಿತ್ರ ನೆಲದಲ್ಲಿ ವಿವಿಧ ಜನಾಂಗ, ಜಾತಿ, ಸಂಸ್ಕೃತಿಗಳು ಒಟ್ಟಿಗೆ ಅರಳಿವೆ; ಬಾಳಿ ಬದುಕಿವೆ. ರಾಷ್ಟ್ರದ ಸಮಗ್ರ ಪ್ರಗತಿಗೆ ನಮ್ಮ ಕೊಡುಗೆಯನ್ನು ನೀಡಿ, ದೇಶಕ್ಕೆ ವಿಶ್ವದಲ್ಲಿಯೇ ಸರಿಸಾಟಿಯಿಲ್ಲದ ಅದ್ವಿತೀಯ ಸ್ಥಾನವನ್ನು ಗಳಿಸಿಕೊಟ್ಟಿವೆ.

ನಮ್ಮ ರಾಷ್ಟ್ರದ ಜಾತ್ಯಾತೀತ ತಳಹದಿ ಅಭದ್ರವಾಗುತ್ತಿದೆ.

ಮತೀಯ ದ್ವೇಷಾಸೂಯೆಗಳಿಂದ ನಮ್ಮ ಪ್ರಗತಿ ಕುಂಠಿತವಾಗಿ ಆರ್ಥಿಕ ವಿಕಾಸ ಅಸ್ತವ್ಯಸ್ತವಾಗುವುದಕ್ಕೆ ಅವಕಾಶ ಮಾಡಿಕೊಡುವುದು ಸರಿಯೇ? ವಿಮರ್ಶಿಸಿ ನೋಡಿ.

ನಮ್ಮ ರಾಜ್ಯಾಂಗದಲ್ಲಿ ಅಳವಡಿಸಿರುವ ಪವಿತ್ರವಾದ ಜಾತ್ಯಾತೀತ ಆದೇಶಗಳಿಗೆ ಕಳಂಕ ತರುವದು ನ್ಯಾಯವೇ? ವಿಚಾರಮಾಡಿ.

ರಾಷ್ಟ್ರದ ಶಾಂತಿ ಮತ್ತು ಪ್ರಗತಿಗಾಗಿ ಒಮ್ಮತದಿಂದ ಒಂದುಗೂಡಿ ಕೋಮು ಸೌಹಾರ್ದದ ಕಾರ್ಯಕ್ರಮಗಳಲ್ಲಿ ಭಾಗವಹಿಸಿ.

ಮತೀಯ ಮನೋವಿಕಾರಗಳನ್ನು ಕಿತ್ತೊಗೆದು, ಒಗ್ಗಟ್ಟು-ಒಮ್ಮನಸ್ಸಿನಿಂದ ತಲೆ ಎತ್ತಿ ನಿಲ್ಲೋಣ. "ವಿಶ್ವದ ಎಲ್ಲ ರಾಷ್ಟ್ರಗಳ, ಎಲ್ಲ ಜನಾಂಗಗಳ ತಿರಸ್ಕೃತ ಗೊಂಡವರಿಗೆ ಮತ್ತು ನಿರಾಶ್ರಿತರಿಗೆ ಆಶ್ರಯ ನೀಡಿದ ಪವಿತ್ರ ರಾಷ್ಟ್ರ ನನ್ನದೆಂಬ ಹೆಮ್ಮೆ ಮತ್ತು ಅಭಿಮಾನ ನನ್ನದು" ಎಂಬ ಸ್ವಾಮಿ ವಿವೇಕಾನಂದರ ವಾಕ್ಯವನ್ನು ನಾವೆಲ್ಲರು ಪುನರುಚ್ಚರಿಸೋಣ.

-ಕರ್ನಾಟಕ ವಾರ್ತೆ.




ಶ್ರೀ ಮಠದಲ್ಲಿ ಫೆಬ್ರವರಿ, 1993 ಜಾತ್ರೆಯ ಅಂಗವಾಗಿ ಏರ್ಪಡಿಸಿದ್ದ ಕೃಷಿ-ಕೈಗಾರಿಕಾ ವಸ್ತು-ಪ್ರದರ್ಶನವನ್ನು ಸಾರಿಗೆ ಸಚಿವರಾದ ಭೀಮಣ್ಣ ಖಂಡ್ರೆ ಉದ್ಘಾಟಿಸಿದರು. ಶಾಸಕರಾದ ಷಫಿಅಹಮದ್ (ಬಲತುದಿ) ಪೂಜ್ಯ ಶ್ರೀ ಶ್ರೀಗಳು ಮತ್ತು ವಿಧಾನ ಪರಿಷತ್ ಸದಸ್ಯ ಟಿ. ಹೆಚ್. ನಾರಾಯಣಸ್ವಾಮಿ (ಎಡತುದಿ ಮೊದಲು) ಅವರನ್ನು ಚಿತ್ರದಲ್ಲಿ ಕಾಣಬಹುದು.




ವಸ್ತು-ಪ್ರದರ್ಶನ ಮುಕ್ತಾಯ ಸಮಾರಂಭದಲ್ಲಿ ತ್ರಿವಿಧ ದಾಸೋಹ ಮೂರ್ತಿಗಳಾದ ಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಸ್ವಾಮೀಜಿಯವರು ಆಶೀರ್ವಚನ ನೀಡುತ್ತಿರುವುದು. ತುಮಕೂರು ಜಿಲ್ಲಾ ಪರಿಷತ್ ಕಾರ್ಯದರ್ಶಿ ಶ್ರೀಮತಿ ಅಮಿತಾ ಪ್ರಸಾದ್, ಲೋಕೋಪಯೋಗಿ ಸಚಿವ ಶ್ರೀ ಟಿ ಎಂ. ಮಂಜುನಾಥ್ ಮತ್ತು ಷಫಿ ಅಹಮದ್ ಅವರನ್ನು ಚಿತ್ರದಲ್ಲಿ ಕಾಣಬಹುದು.

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ, 572104.



"SIDDAGANGA" MONTHLY Reg. No. KRNQ-9